

ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ



"ಸಾಮಾಜಿಕ ಸ್ವಾತಂತ್ರ್ಯ ಸಾಧಿಸದ
ಹೊರತು ಕಾನೂನಿನ ಮೂಲಕ ನೀಡುವ
ಯಾವುದೇ ರೀತಿಯ ಸ್ವಾತಂತ್ರ್ಯ
ನಿಷ್ಪ್ರಯೋಜಕವಾಗುವುದು."

- ಡಾ. ಬಿ. ಆರ್. ಅಂಬೇಡ್ಕರ್

# 77ನೇ ಸ್ವಾತಂತ್ರ್ಯೋತ್ಸವದ ಶುಭಾಶಯಗಳು



**ಶ್ರೀ ಸಿದ್ದರಾಮಯ್ಯ**
ಸನ್ಮಾನ್ಯ ಮುಖ್ಯಮಂತ್ರಿಗಳು



**ಶ್ರೀ ಸಿದ್ದರಾಮಯ್ಯ**, ಸನ್ಮಾನ್ಯ ಮುಖ್ಯಮಂತ್ರಿಗಳು ಮತ್ತು **ಶ್ರೀ ಡಿ.ಕೆ. ಶಿವಕುಮಾರ್**, ಮಾನ್ಯ ಉಪಮುಖ್ಯಮಂತ್ರಿಗಳು ಪಂಚ ಯೋಜನೆ ಘೋಷಿಸಿದ ಸುಸಂದರ್ಭ.

**ಶಕ್ತಿ**
ಮಹಿಳೆಯರಿಗೆ ಬಸ್ ಸಂಚಾರ ಉಚಿತ

**ಅನ್ನಭಾಗ್ಯ**
ಬಡವರಿಗೆ
10kg
ಪ್ರತಿ ತಿಂಗಳು ತಲಾ 10Kg ಆಹಾರಧಾನ್ಯ ಅಥವಾ ತಲಾ 5Kg ಆಹಾರಧಾನ್ಯ ಹಾಗೂ ರೂ. 170/-

**ಗೃಹಲಕ್ಷ್ಮಿ**
ಪ್ರತಿ ಮನೆಯೊಡತಿಗೆ ಪ್ರತಿ ತಿಂಗಳು
₹2000

**ಗೃಹ ಜ್ಯೋತಿ**
ಪ್ರತಿ ಮನೆಗೆ ಗರಿಷ್ಠ
200
ಯೂನಿಟ್ ವಿದ್ಯುತ್ ಉಚಿತ

**ಯುವನಿಧಿ**
ಪ್ರತಿ ತಿಂಗಳು ನಿರುದ್ಯೋಗ ಭತ್ಯೆ
₹3000 ಪದವೀಧರರಿಗೆ | ₹1500 ಡಿಪ್ಲೋಮಾ ಪದವೀಧರರಿಗೆ

## ಪ್ರಗತಿಪರ ಅಭಿವೃದ್ಧಿಗಾಗಿ ನುಡಿದಂತೆ ನಡೆದಿದ್ದೇವೆ...



ಕರ್ನಾಟಕ ಗಾಂಧಿ
ಸ್ಮಾರಕ ನಿಧಿ


**ಬಾಪು ಪ್ರಪಂಚ**
ಕನ್ನಡ–ಇಂಗ್ಲೀಷ್ ಮಾಸಿಕ

**BAPU PRAPANCHA**
(A monthly Kannada English
Magazine of Gandhian Thoughts)

ಪ್ರಧಾನ ಸಂಪಾದಕರು
**ನಾಡೋಜ ಡಾ. ವೂಡೇ ಪಿ. ಕೃಷ್ಣ**

Chief Editor :
**Nadoja Dr Wooday P Krishna**

ಸಂಪಾದಕರು :
**ಎನ್. ಆರ್. ವಿಶುಕುಮಾರ್**

Editor :
**N R Vishukumar**

**ಪ್ರಕಾಶಕರು :**
**ಕಾರ್ಯದರ್ಶಿ,**
**ಕರ್ನಾಟಕ ಗಾಂಧಿ ಸ್ಮಾರಕ ನಿಧಿ**
ಗಾಂಧಿ ಭವನ, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು – 560 001

Published by :
**Secretary**
**Karnataka Gandhi Smaraka Nidhi**
Gandhi Bhavana, Kumara Park East
Bangalore - 560 001

080 22261967 / 9738605799
gandhibhavanabengaluru@gmail.com

Printed at :
**Printastic**
272, 2nd Main Road, 6th Cross,
Lavakushanagar, Laggere Bangalore-58
Ph : +91 9886747417
E-mail : printastic.21@gmail.com





Design : **Ujwal Creations,** Bangalore



ರೂ. 28/– **BAPU PRAPANCHA**

ಕರ್ನಾಟಕ ಗಾಂಧಿ ಸ್ಮಾರಕ ನಿಧಿ

# ಬಾಪು ಪ್ರಪಂಚ

ಕನ್ನಡ–ಇಂಗ್ಲೀಷ್ ಮಾಸಿಕ ಸಂಪುಟ–05 • ಸಂಚಿಕೆ–04 • **ಸೆಪ್ಟೆಂಬರ್ 2023**



**05** ಆಚಾರ್ಯ ವಿನೋಬಾ ಭಾವೆ
-ನಾಡೋಜ ಡಾ. ಜಿ. ಕೃಷ್ಣಪ್ಪ

**09** ಆಚಾರ್ಯ ವಿನೋಬಾ ಭಾವೆ ಮತ್ತು ಕುವೆಂಪು
-ನಾಡೋಜ ಡಾ. ಜಿ. ಕೃಷ್ಣಪ್ಪ

**10** ಗಾಂಧಿ ಚಿಂತನೆ -3
-ಜಗದೀಶ್ ಕೊಪ್ಪ

**11** ಗಾಂಧಿ ಮತ್ತು ಕರ್ನಾಟಕ (ಭಾಗ-4)

**15** ಅರಸೀಕೆರೆಯಲ್ಲಿ ನಂದಿನ ರಾಷ್ಟ್ರೀಯ ಯುವ ಶಿಬಿರ

**19** ಮಹಾತ್ಮಾ ಗಾಂಧಿಯವರ ಮಹತ್ವಗಳು

**20** ವಿಶ್ವವಂದಿತ ವೈಷ್ಣವಜನತೊ
-ಸಿ. ಯು. ಬೆಳ್ಳಕ್ಕಿ

**22** ಕರ್ನಾಟಕದ ಗಾಂಧಿವಾದಿಗಳು : ಬಿ. ಕೆ. ಭಂಡಾರಿ
- ಚರಣ್ ಐವರ್ನಾಡು

**24** ಮ್ಯಾಡಮ್ ಭಿಕಾಜಿ ರುಸ್ತಮ್ ಕಾಮಾ:
ಭಾರತದ ಧ್ವಜವನ್ನು ಹಾರಿಸಿದ ಮೊದಲ ಮಹಿಳೆ
-ಡಾ.ಎಸ್. ಬಿ. ಬಸೆಟ್ಟಿ

**26** **Wicket Gate in a Wicked Coach Pietermaritzburg and Gandhi**
-D John Chelladurai

**28** Digital Gandhi

**29** ಮಕ್ಕಳಿಗಾಗಿ ಗಾಂಧಿ ಕತೆ

**30** ಮಹಾತ್ಮಾ ಗಾಂಧಿಯವರ ಮಹತ್ವಗಳು

**31** ಚಿತ್ರಾವಳಿ


ಹಿಂದಿನ ರಕ್ಷಾಪುಟ ಚಿತ್ರ : ಎಂ ಎಸ್ ಮೂರ್ತಿ



# ಪತ್ರಗಳು

### ಕ್ವಿಟ್ ಇಂಡಿಯಾ ಚಳವಳಿ

ಭಾರತ ಸ್ವಾತಂತ್ರ್ಯಕ್ಕೆ ಮುನ್ನುಡಿ ಬರೆದ 'ಕ್ವಿಟ್ ಇಂಡಿಯಾ ಚಳವಳಿ' ಮಹಾತ್ಮ ಗಾಂಧೀಜಿಯವರ ಮುನ್ನೋಟಕ್ಕೆ ಹಿಡಿದ ಕನ್ನಡಿ. ಅವರು ಭಾರತ ಸ್ವಾತಂತ್ರ್ಯ ಚಳವಳಿಯನ್ನು ಯೋಜನಾಬದ್ಧವಾಗಿ ನಿರ್ವಹಿಸಿದ ಮತ್ತು ಮುನ್ನಡೆಸಿದ ಪರಿ ಈಗಲೂ ಎಲ್ಲರಿಗೆ ಅಚ್ಚರಿ. ಇಡೀ ಭಾರತೀಯರನ್ನು ಅವರು ಸಂಯಮದಿಂದ, ಅಹಿಂಸೆಯಿಂದ ಸತ್ಯ ಶಾಂತಿ ಮಾರ್ಗದಲ್ಲಿ ಸ್ವಾತಂತ್ರ್ಯದೆಡೆಗೆ ಕರೆದೊಯ್ದರು. ತಾವು ಸೆರೆವಾಸದಲ್ಲಿದ್ದರೂ ಸ್ವಾತಂತ್ರ್ಯ ಚಳವಳಿಯನ್ನು ಸಮರ್ಥವಾಗಿ ಮುನ್ನಡೆಸುವ ಎರಡನೇ, ಮೂರನೇ ಹಂತದ ನಾಯಕರನ್ನು ಅವರು ಸಿದ್ಧಪಡಿಸಿದ್ದರು.

ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಗಾಂಧೀಜಿ ಸೇರಿದಂತೆ ಪ್ರಮುಖ ನಾಯಕರೆಲ್ಲರೂ ಸೆರೆಯಾದಾಗ ಜಯಪ್ರಕಾಶ್ ನಾರಾಯಣ್ ಮತ್ತು ಅರುಣಾ ಆಸೀಫ್ ಆಲಿ ಅವರುಗಳು ಕ್ವಿಟ್ ಇಂಡಿಯಾ ಚಳವಳಿಯನ್ನು ಮುನ್ನಡೆಸುತ್ತಾರೆ. ಈ ಚಳವಳಿ ಆರಂಭವಾದ ಐದು ವರ್ಷಗಳ ನಂತರ ಅಂತಿಮವಾಗಿ ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕಿತು. ನೇತಾಜಿ ಗಾಂಧಿಯವರ ಲೇಖನ ಆಗಸ್ಟ್ ತಿಂಗಳಿನ ಸಂಚಿಕೆಗೆ ಸಕಾಲಿಕವಾಗಿತ್ತು.

**ಲಿಂಗಣ್ಣ, ಮಂಡ್ಯ**

* * *

### ಗಾಂಧಿ ಮತ್ತು ಕರ್ನಾಟಕ

ಗಾಂಧಿ ಮೊಟ್ಟ ಮೊದಲ ಬಾರಿಗೆ ಬೆಂಗಳೂರಿಗೆ 1915 ಮೇ 8 ರಂದು ಭೇಟಿ ನೀಡಿದ ಸಂದರ್ಭದ ವಿವರಗಳು ಚೇತೋಹಾರಿಯಾಗಿವೆ. ಅಂದಿನ ಮೈಸೂರು ರಾಜ್ಯದ ಘಟಾನುಘಟಿ ವ್ಯಕ್ತಿಗಳು ಈ ಸಂದರ್ಭದಲ್ಲಿ ಗಾಂಧಿಯವರ ಜೊತೆ ಒಡನಾಡಿದ ಪ್ರಸಂಗಗಳು ಕುತೂಹಲವಾಗಿವೆ. ಪತ್ನಿ ಕಸ್ತೂರ್ ಬಾ ಜೊತೆ ಬೆಂಗಳೂರಿಗೆ ಬಂದ ಗಾಂಧಿ ಅವರಿಗೆ ಈ ಅಪೂರ್ವ ಭೇಟಿ ಅವರ ಮುಂದಿನ ಹೋರಾಟಗಳಿಗೆ ಒಂದು ಸಮರ್ಥ ವೇದಿಕೆಯನ್ನು ಸೃಷ್ಟಿಸಿತು . ಹಾಗೆಯೆ ಈ ಭೇಟಿ ಗಾಂಧಿಯವರ ಸರಳ ವ್ಯಕ್ತಿತ್ವವನ್ನು ಅರಿಯಲು ಅಂದಿನ ಮೈಸೂರು ಸಂಸ್ಥಾನಕ್ಕೆ ಸಹಕಾರಿಯಾಯಿತು . ಈ ಸರಣಿ ಕರ್ನಾಟಕಕ್ಕೆ ಸೊಗಸಾಗಿದೆ.

**ಬಿ ಕೆ ಚಂದ್ರಶೇಖರ್, ಮೈಸೂರು.**

* * *

### ವಿಶೇಷ ಗಾಂಧಿ

ಸಿ ಯು ಬೆಳ್ಳಕ್ಕಿ ಯವರ **'ಗಾಂಧೀಜಿ ಪತ್ರ ಲೋಕದ ಮೋಡಿ'** ವಿಶೇಷವಾಗಿದೆ. ಗಾಂಧೀಜಿ ಇಂಥ ತಮ್ಮ ವಿಶೇಷ ಗುಣಗಳಿಂದಲೇ ವಿಶ್ವದ ಗಮನ ಸೆಳೆದಿದ್ದಾರೆ. ವಿಶ್ವ ನಾಯಕರುಗಳು ಮತ್ತು ಜನ ಸಾಮಾನ್ಯರ ಜೊತೆ ಕೂಡಾ ಅವರು ಪತ್ರ ಬರವಣಿಗೆಯ ಮೂಲಕ ಕಲ್ಪಿಸಿಕೊಂಡಿದ್ದ ಸಂಬಂಧ ಅಪರೂಪದ್ದಾಗಿತ್ತು.

**ಕುಲಕರ್ಣಿ, ಧಾರವಾಡ**




ಪ್ರಿಯರೆ,

ಬಾಪೂ ಪ್ರಪಂಚ ಸಂಚಿಕೆಯ ಬಗ್ಗೆ ಓದುಗರು ವ್ಯಕ್ತಪಡಿಸುತ್ತಿರುವ ಸದಭಿಪ್ರಾಯಗಳಿಗೆ ಗಾಂಧಿ ಸ್ಮಾರಕ ನಿಧಿ ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ನಿಮ್ಮ ಅಪೇಕ್ಷೆಯಂತೆ ಬಾಪೂ ಪ್ರಪಂಚ ಪತ್ರಿಕೆಯನ್ನು ಹೆಚ್ಚು ಜನರಿಗೆ ತಲುಪಿಸಲು ಪ್ರಯತ್ನಿಸುತ್ತೇವೆ.

**ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಪ್ರಕಟಣೆಗಳು ಮತ್ತು ಬಾಪೂ ಪ್ರಪಂಚದ ಇತ್ತೀಚಿನ ಸಂಚಿಕೆಗಳನ್ನು gandhi.sanchaya.net ಜಾಲತಾಣದಲ್ಲಿ ವೀಕ್ಷಿಸಿ.**

**ಪತ್ರಿಕೆಗೆ ಚಂದಾದಾರರಾಗಲು ಆಸಕ್ತಿ ಇರುವವರು ವಾರ್ಷಿಕ 250 ರೂಗಳನ್ನು ಪಾವತಿಸಿ ವಿಳಾಸ ಕಳುಹಿಸಿದರೆ ಅವರಿಗೆ ಅಂಚೆ ಮೂಲಕ ಪತ್ರಿಕೆಯನ್ನು ಕಳುಹಿಸಲಾಗುವುದು.**

ಚಂದಾ ಕಳುಹಿಸುವ ಮತ್ತು ಪತ್ರಿಕೆಯ ಬಗ್ಗೆ ತಮ್ಮ ಅಭಿಪ್ರಾಯ ತಿಳಿಸುವ ವಿಳಾಸ :

**ಸಂಪಾದಕರು, ಬಾಪು ಪ್ರಪಂಚ**

ಗಾಂಧಿ ಭವನ

ಕುಮಾರ ಪಾರ್ಕ್ ಪೂರ್ವ,

ಬೆಂಗಳೂರು –560001

gandhibhavanabengaluru@gmail.com




ಬಾಪು ಪ್ರಪಂಚ ಪತ್ರಿಕೆಯ ವಾರ್ಷಿಕ ಚಂದಾ ಹಣ 250 ರೂಗಳನ್ನು ಈ ಕೆಳಗಿನ ಕ್ಯೂಆರ್ ಕೋಡ್ ಮೂಲಕ ಪಾವತಿಸಿ, ನಿಮ್ಮ ಅಂಚೆ ವಿಳಾಸವನ್ನು ಗಾಂಧಿ ಭವನದ ಮೇಲಿನ ವಿಳಾಸಕ್ಕೆ ಹಣ ಪಾವತಿ ವಿವರಗಳ ಜೊತೆ ಕಳುಹಿಸಿ.







# ಆಚಾರ್ಯ ವಿನೋಬಾಭಾವೆ

– ನಾಡೋಜ ಡಾ. ಜಿ. ಕೃಷ್ಣಪ್ಪ

'ಶ್ರೀ ವಿನೋಬಾಜಿಯಲ್ಲಿ ಭಾರತೀಯ ಪರಂಪರೆಯ ಪ್ರಾಚೀನ ತಪಸ್ವಿಯೂ ಅತ್ಯಂತ ಕ್ರಾಂತಿಕಾರಕನಾದ ಆಧುನಿಕ ರಾಜಕೀಯಾರ್ಥಿಕ ವಿಜ್ಞಾನಿಯೂ ಒಟ್ಟುಗೂಡಿದಂತಿದೆ. ಈ ದೃಷ್ಟಿಯಿಂದ ನೋಡಿದರೆ ಗಾಂಧೀಜಿಯ ನಿಜವಾದ ಉತ್ತರಾಧಿಕಾರಿ ಅವರಲ್ಲದೆ ಬೇರೆ ಇನ್ನಾರೂ ಇಲ್ಲ.' ಎಂದು ಕುವೆಂಪು ಹೇಳಿದ್ದಾರೆ. (ಕುವೆಂಪು ಸಮಗ್ರ ಗದ್ಯ ಸಂ.2, ಪು. 248) ಅಂತಹ ಸಂತ, ಯೋಗಿ, ಆಚಾರ್ಯ ವಿನೋಬಾಭಾವೆಯವರು ಮಹಾರಾಷ್ಟ್ರದ ರಾಯಗಡ ಜಿಲ್ಲೆಯ ಗಾಗೋದೆ ಗ್ರಾಮದಲ್ಲಿ 11–09–1895 ರಂದು ಹುಟ್ಟಿದರು. ಅವರ ತಂದೆ ನರಹರಿ ಶಂಭೂರಾವ್ ಭಾವೆ, ತಾಯಿ ರುಕ್ಮಿಣಿದೇವಿ. ಆ ತಾಯಿ ಕರ್ನಾಟಕದ ಜಮಖಂಡಿಯವರು. ಅವರು ಮರಾಠಿ, ಕನ್ನಡ ಭಜನೆಗಳನ್ನು ಹೇಳುತ್ತಿದ್ದರು.

ವಿನೋಬ ಅವರ ಪ್ರಾಥಮಿಕ ಶಿಕ್ಷಣ ಗಾಗೋದೆಯಲ್ಲಿ ಇನಾಂದರರಾದ ತಾತ ಶಂಭೂರಾವ್ ಭಾವೆ ಅವರ ಅಡಿಯಲ್ಲಿ ನಡೆಯಿತು. ತಾತ ಅವರ ಸ್ವಂತ ಶಿವನ ದೇವಾಲಯದಲ್ಲಿ, ಭಂಗಿ ಚಮ್ಮಾರರನ್ನೊಳಗೊಂಡ ಎಲ್ಲರಿಗೂ ಮುಕ್ತ ಪ್ರವೇಶವಿತ್ತು. ಅವರು ದೇವರ ಮುಂದೆ ಎಲ್ಲರೂ ಸಮಾನರು ಎಂಬ ಸತ್ಯವನ್ನು ಆಚರಣೆಗೆ ತಂದವರಾಗಿದ್ದರು.

**ಬರೋಡದಲ್ಲಿ ಪ್ರೌಢಶಾಲಾ, ಕಾಲೇಜು ಶಿಕ್ಷಣ**

ವಿನೋಬಾ ಅವರ ತಂದೆ ಬರೋಡದಲ್ಲಿ ಸರ್ಕಾರಿ ಉದ್ಯೋಗದಲ್ಲಿದ್ದರು. ವಿನೋಬಾ ಅಲ್ಲಿ ಪ್ರೌಢಶಾಲಾ ಶಿಕ್ಷಣ ಪಡೆದು ಮೆಟ್ರಿಕ್ ಪಾಸಾದರು. ಅವರು ಆ ಹೊತ್ತಿಗೆ ವೇದ, ಉಪನಿಷತ್ತು ಗೀತೆಯನ್ನು ಆಳವಾಗಿ ಅಧ್ಯಯನ ಮಾಡಿದ್ದರು. ಗಣಿತದಲ್ಲಿ ಪರಿಣತರಾಗಿದ್ದರು. ಬರೋಡದ ಸೆಂಟ್ರಲ್ ಲೈಬ್ರರಿಯಲ್ಲಿದ್ದ ಸಹಸ್ರಾರು ಪುಸ್ತಕಗಳನ್ನು ಓದಿದ್ದರು. ಅವರು ಜ್ಞಾನೇಶ್ವರಿ ಗ್ರಂಥದ ಅಧ್ಯಯನ ಮಾಡಿದ್ದು, ಬ್ರಹ್ಮಚರ್ಯ ವ್ರತನಿಷ್ಠೆ, ಸ್ವತಂತ್ರ ವಿಚಾರಶೀಲತೆ ಬೆಳೆಸಿಕೊಂಡಿದ್ದರು.

**ವಿರಕ್ತಿ ಭಾವದ ಯುವ ವಿನಾಯಕ**

ಅವರು ಪ್ರೌಢವಯಸ್ಸಿಗೇ ವಿರಕ್ತಿ ಭಾವಕ್ಕೆ ಒಳಗಾಗಿದ್ದರು. ಇಂಟರ್‌ಮೀಡಿಯಟ್ ಪರೀಕ್ಷೆಗೆಂದು ಸ್ನೇಹಿತರೊಡನೆ ಬಾಂಬೆಗೆ ಹೊರಟಿದ್ದ



ವಸ್ತುಗಳನ್ನು ಬೆಳೆದುಕೊಳ್ಳುತ್ತಿದ್ದರು. ಅವರು 'ಮಹಾರಾಷ್ಟ್ರ ಧರ್ಮ' ಪತ್ರಿಕಾ ಸಂಪಾದಕರಾಗಿ ಪತ್ರಿಕೆ ನಡೆಸಿದರು.

**ವೈಯಕ್ತಿಕ ಸತ್ಯಾಗ್ರಹದ ಪ್ರಥಮ ಸತ್ಯಾಗ್ರಹಿ**

1940 ರಲ್ಲಿಯ ಎರಡನೆ ಮಹಾಯುದ್ಧದಲ್ಲಿ ಬ್ರಿಟೀಷರು ಭಾರತವನ್ನು ಯುದ್ಧದಲ್ಲಿ ತೊಡಗಿಸಲು ಪ್ರಯತ್ನಿಸುತ್ತಿದ್ದರು. ಗಾಂಧೀಜಿ ಆ ಯುದ್ಧವನ್ನು ವಿರೋಧಿಸಿದರು. ಸರ್ಕಾರ ಭಾಷಣ ಸ್ವಾತಂತ್ರ್ಯ ನಿರ್ಬಂಧಿಸಿತು. ಆಗ ಗಾಂಧೀಜಿ ವ್ಯಕ್ತಿಗತ ಸತ್ಯಾಗ್ರಹ ಆಂದೋಲನ ಮಾಡಲು ನಿರ್ಧರಿಸಿದರು. ವರ್ಧಾದಲ್ಲಿ 11–10–1940 ರಲ್ಲಿ ಕಾಂಗ್ರೇಸ್ ಕಾರ್ಯಕಾರಿಣಿ ಸಭೆ ನಡೆಯಿತು. ಅದರಲ್ಲಿ ಗಾಂಧೀಜಿಯವರು ಮೊದಲನೇ ಸತ್ಯಾಗ್ರಹಿ ಎಂದು ವಿನೋಬಾ ಭಾವೆಯವರ ಹೆಸರನ್ನು ಪ್ರಕಟಿಸಿದರು. ಆಗ ಬ್ರಹ್ಮಚಾರಿ, ವಿದ್ವಾಂಸ, ಮೌನ ಸೇವಕರಾಗಿದ್ದ ವಿನೋಬಾ ಇಡೀ ಭಾರತಕ್ಕೆ ಮತ್ತು ವಿಶ್ವಕ್ಕೆ ಪರಿಚಯವಾದರು.

**ಸ್ವಾತಂತ್ರ್ಯ ಹೋರಾಟ–ಜೇಲುವಾಸ**

ವಿನೋಬಾ ಅವರು ಯುದ್ಧ ವಿರೋಧಿ ಭಾಷಣ ಮಾಡುತ್ತ ಗ್ರಾಮದಿಂದ ಗ್ರಾಮಕ್ಕೆ ಸಾಗುವಾಗ ದಸ್ತಗಿರಿಯಾದರು. ಅವರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ 1923 ರಿಂದ 1943 ರವರೆಗೆ ಅನೇಕ ಬಾರಿ ಜೇಲುವಾಸ ಅನುಭವಿಸಿದರು. ಅಲ್ಲಿಯೂ ಅವರು ಅಸಂಗ್ರಹ, ಆಸ್ವಾದ ವ್ರತ, ಇಂದ್ರಿಯ ನಿಗ್ರಹಗಳಿಂದ ಅಲ್ಲಿಯ ನಿಯಮ ಪಾಲನೆ ಮಾಡುತ್ತಿದ್ದರು.

ಅವರು ನಾಗಪುರದಲ್ಲಿ 1923 ರಲ್ಲಿ

ಅವರು ಸೂರತ್‌ನಲ್ಲಿ ಇಳಿದು ಕಾಶಿಯ ಕಡೆ ರೈಲು ಹತ್ತಿದರು. ಬ್ರಹ್ಮಜಿಜ್ಞಾಸೆ, ಬ್ರಹ್ಮವಿದ್ಯೆ, ಆತ್ಮಸಾಕ್ಷಾತ್ಕಾರದತ್ತ ಮುಖಮಾಡಿದರು.

**ಗಾಂಧಿ ಪ್ರಭಾವ, ಆಶ್ರಮವಾಸ**

ಕಾಶಿಯಲ್ಲಿದ್ದಾಗ ಗಾಂಧೀಜಿಯವರ ಭಾಷಣದ ಪ್ರಭಾವಕ್ಕೆ ಒಳಗಾದರು. ಅವರಿಗೆ ಪತ್ರ ಬರೆದು 7–6–1916 ರಂದು ಅಲಹಾಬಾದಿನ ಸಬರಮತಿಯ ಸತ್ಯಾಗ್ರಹ ಆಶ್ರಮಕ್ಕೆ ಹೋದರು. ಅಲ್ಲಿ ಗಾಂಧಿ ತತ್ತ್ವಾನುಯಾಯಿಯಾಗಿ ಸತ್ಯಾನ್ವೇಷಣೆಗೆ ತೊಡಗಿ ಸಮಾಜಸೇವೆ, ಅಧ್ಯಾತ್ಮಿಕ ಉನ್ನತಿಯ ಸಾಧಕರಾದರು. ಗಾಂಧಿಯವರು ವಿನಾಯಕನನ್ನು ವಿನೋಬಾ ಎಂದು ಕರೆದರು. ಅದೇ ಅವರ ಹೆಸರಾಗಿ ಉಳಿಯಿತು.

ಯುವ ಬ್ರಾಹ್ಮಣ ಜಿಜ್ಞಾಸು ಭಂಗಿ ಕೆಲಸವನ್ನು ಪವಿತ್ರವೆಂದು ಮಾಡುತ್ತಿದ್ದರು. ಆಶ್ರಮದಲ್ಲಿ ನೂಲುವುದು, ನೇಯುವುದು, ಬೀಸುವುದು, ಗಿಡಗಳಿಗೆ ನೀರುಣಿಸುವುದು, ಸ್ವಚ್ಛಗೊಳಿಸುವುದು, ಅಡಿಗೆ ಮಾಡುವುದು ಎಲ್ಲ ಕೆಲಸವನ್ನು ಮೌನವಾಗಿ ಆಸಕ್ತಿ ವಹಿಸಿ ಚೆನ್ನಾಗಿ ಮಾಡುತ್ತಿದ್ದರು. ಅವರ ತಮ್ಮಂದಿರರಾದ ಬಾಳ್ಕೋಬಾಭಾವೆ ಮತ್ತು ಶಿವಾಜಿ ಭಾವೆಯವರು ಅಣ್ಣನಂತೆ ಬ್ರಹ್ಮಚಾರಿಗಳಾಗಿದ್ದು, ಕೊನೆಯವರೆಗೆ ಆಶ್ರಮವಾಸಿಗಳಾಗಿದ್ದರು.

**ವರ್ಧಾ ಆಶ್ರಮ**

ಜಮುನಾಲಾಲ್ ಬಜಾಜ್ ಅವರು ವರ್ಧಾದಲ್ಲಿ ಆಶ್ರಮ ಮಾಡಬೇಕೆಂಬ ಅಪೇಕ್ಷೆಯನ್ನು ಗಾಂಧೀಜಿಯವರಲ್ಲಿ ವ್ಯಕ್ತಪಡಿಸಿದರು. ಗಾಂಧೀಜಿಯವರ ಸೂಚನೆಯಂತೆ ವಿನೋಬಾ ಅವರು ವರ್ಧಾದಲ್ಲಿ ಆಶ್ರಮವನ್ನು 08–04–1921 ರಂದು ಸ್ಥಾಪಿಸಿದರು.

ವಿನೋಬ ಅವರು ಸಾಮಾಜಿಕ ವಿಷಮತೆಯ ಮೂಲವೇ ಹಣ ಎಂದು ತಿಳಿದಿದ್ದರು. ಅವರು ಹಣದಿಂದ ಮುಕ್ತವಾಗುವ ಪ್ರಯೋಗವನ್ನು ವರ್ಧಾದಿಂದ ಹನ್ನೆರಡು ಮೈಲಿ ದೂರದಲ್ಲಿದ್ದ ಪವನಾರ ಆಶ್ರಮದಲ್ಲಿ ಮಾಡಿದರು. ಅದು ಋಷಿಖೇತಿ ಪ್ರಯೋಗವಾಗಿತ್ತು. ಅಲ್ಲಿ ಎಲ್ಲ ಅವಶ್ಯಕ



ರಾಷ್ಟ್ರಧ್ವಜ ರಕ್ಷಣಾ ಸತ್ಯಾಗ್ರಹದಲ್ಲಿ ಬಂಧಿತರಾಗಿ ಐದು ತಿಂಗಳ ಕಠಿಣ ಶಿಕ್ಷೆ ಅನುಭವಿಸಿದರು. ಆ ಅವಧಿಯಲ್ಲಿ ಜೈಲಿನ ಸಹವಾಸಿಗಳಿಗೆ ಪ್ರತಿದಿನ ಉಪನಿಷತ್ತು ಕುರಿತು ಹೇಳುತ್ತಿದ್ದರು. ಅದು 'ಉಪನಿಷತ್ತುಗಳ ಅಧ್ಯಯನ ಕೃತಿಯಾಗಿ ಪ್ರಕಟವಾಯಿತು.

**ಭಗವದ್ಗೀತೆಯ ಬೋಧೆ**

ವಿನೋಬಾ ಅವರು 1932 ರಲ್ಲಿ ಧುಲಿಯಾ ಸೆರೆಮನೆಯಲ್ಲಿ ಆರು ತಿಂಗಳು ಇದ್ದರು. ಆಗ ಅವರು ಪುರುಷ ಖೈದಿಗಳಿಗೆ ಗೀತೆಯ ಬಗ್ಗೆ ಪ್ರವಚನ ನೀಡುತ್ತಿದ್ದರು. ಸ್ತ್ರೀ ಖೈದಿಗಳು ತಮಗೂ ಆ ಪ್ರವಚನ ಬೇಕು ಎಂದಾಗ ಜೈಲರ್ ಅವರಿಗೂ ವಾರದಲ್ಲಿ ಒಂದು ದಿನ ಪ್ರವಚನ ವ್ಯವಸ್ಥೆ ಮಾಡಿದರು. ಆ ಜೈಲರ್ ತನ್ನ ಪತ್ನಿಯೊಂದಿಗೆ ಬಂದು ಪ್ರವಚನ ಕೇಳುತ್ತಿದ್ದರು. ಅದು 'ಗೀತಾಯಿ' ಆಗಿ ಮರಾಠಿ ಭಾಷೆಯಲ್ಲಿ ಪ್ರಕಟವಾಯಿತು.

ವಿನೋಬಾ ಜೇಲಿನಿಂದ ಬಿಡುಗಡೆ ಆಗುವ ದಿನ ಖೈದಿಗಳು ತಮ್ಮ ಶ್ರಮದ ಹಣ ಎರಡಾಣೆ ಕೊಡಿ ಎಂದು ಅಧಿಕಾರಿಗಳನ್ನು ಕೇಳಿಪಡೆದರು. ಒಂದು ಆಣೆಗೆ 'ಗೀತಾಯಿ' ಕೊಂಡರು. ಇನ್ನೊಂದು ಆಣೆಯನ್ನು ವಿನೋಬಾಗೆ ಗುರುಕಾಣಿಕೆಯಾಗಿ ನೀಡಿದರು!

1940ರ ಹೋರಾಟದಲ್ಲಿ ಮೂರು ಸಲ ದಸ್ತಗಿರಿಯಾಗಿ ಜೇಲಿನಲ್ಲಿದ್ದರು. ಹಾಗೊಮ್ಮೆ ವೆಲ್ಲೂರು ಜೈಲಿನಲ್ಲಿದ್ದಾಗ ತಮಿಳು, ಕನ್ನಡ, ತೆಲುಗು, ಮಲಯಾಳ ಭಾಷೆಗಳನ್ನು ಕಲಿತರು. ಅವರಿಗೆ 16 ಭಾಷೆಗಳನ್ನು ಓದಲು ಬರೆಯಲು ಬರುತ್ತಿತ್ತು. ಅವರು ಕುರಾನ್ ಓದಲು ಅರಬ್ಬೀ ಭಾಷೆ ಕಲಿತರು; ಬೌದ್ಧ ಧರ್ಮ ತಿಳಿಯಲು ಪಾಲಿಭಾಷೆ ಕಲಿತರು. ಅವರು ಸದಾ ಅಧ್ಯಯನಶೀಲರಾಗಿರುತ್ತಿದ್ದರು. ಸಾವಿರಾರು ದೇವರನಾಮಗಳನ್ನು ಹೇಳುತ್ತಿದ್ದರು. ಅವರ ನೆನಪಿನ ಶಕ್ತಿ ಅಗಾಧವಾದುದಾಗಿತ್ತು. ಅವರು ಸತ್ಯಾಗ್ರಹ, ಸ್ವಾತಂತ್ರ್ಯ ಹೋರಾಟ, ಬೋಧನೆ, ಆತ್ಮಜ್ಞಾನ ಸಾಧಕರಾಗಿ ಗಾಂಧೀಜಿಯವರ ಅಧ್ಯಾತ್ಮಿಕ ಉತ್ತರಾಧಿಕಾರಿಯಾದರು.

**ಗ್ರಾಮ ಸ್ವರಾಜ್**

ಗಾಂಧೀಜಿಯವರು ಸೇವಾಗ್ರಾಮ ರೂಪಿಸಿ, ಆ ಮೂಲಕ ಆರ್ಥಿಕ, ಸಾಮಾಜಿಕ ಕ್ರಾಂತಿ ಉಂಟುಮಾಡಬೇಕೆಂದು ಬಯಸಿದ್ದರು. ಅವರ ಹತ್ಯೆಯ ನಂತರ, ಆ ಚಿಂತನೆಯನ್ನು ಕಾರ್ಯಗತಗೊಳಿಸಲು ವಿನೋಬಾಜಿಯವರು 'ಸರ್ವಸೇವಾಸಂಘ' ಸಂಘ ಸ್ಥಾಪಿಸಿ ಅದರ ಮಾರ್ಗದರ್ಶಕರಾದರು. 'ಸೇವಾಗ್ರಾಮ'ವು ಎಲ್ಲ ಚಟುವಟಿಕೆಗಳ ಕೇಂದ್ರವಾಯಿತು. 'ಗ್ರಾಮಸ್ವರಾಜ್ಯ'ದಿಂದ ಗಾಂಧಿಯವರ ಕನಸನ್ನು ನನಸಾಗಿಸಲು ಗಮನಹರಿಸಿದರು. ಅದನ್ನು 'ಸರ್ವೋದಯ ಆಂದೋಲನ' ಎಂದರು.

1948 ರಲ್ಲಿ ಪ್ರಧಾನಿ ನೆಹರು ಸೂಚನೆಯಂತೆ ದೆಹಲಿಗೆ ಹೋಗಿ ನಿರಾಶ್ರಿತರ ಸೇವೆ ಮಾಡಿದರು. ಆಗ ಹರಿಜನರು–ತಾವು ಕೃಷಿ ಕಾರ್ಮಿಕರಾಗಿದ್ದು ತಮಗೆ ವ್ಯವಸಾಯದ ಭೂಮಿ ದೊರೆತರೆ ಸ್ವತಂತ್ರ ಜೀವನ ಸಾಧ್ಯ ಎಂದು ಹೇಳಿದರು. ಕಾನೂನು ಭೂಮಾಲೀಕರ ಪರವಾಗಿದ್ದು, ಈ ಸಮಸ್ಯೆ ಬಗೆಹರಿಸುವುದು ಹೇಗೆ ಎಂದು ಚಿಂತಿಸುತ್ತ ಪವನಾರ್ ಆಶ್ರಮಕ್ಕೆ ಹಿಂದಿರುಗಿದರು.

**ಭೂದಾನ ಯಜ್ಞ**

1951 ಏಪ್ರಿಲ್ 7 ರಿಂದ 14 ರವರೆಗೆ ಹೈದರಾಬಾದ್ ಹತ್ತಿರದ ಶಿವರಾಂಪಲ್ಲಿಯಲ್ಲಿ ಸರ್ವೋದಯ ಸಮ್ಮೇಳನ ನಡೆಯಿತು. ವಿನೋಬಾ ಅವರು 300 ಕಿ.ಮೀ. ದೂರದ ಶಿವರಾಂಪಲ್ಲಿಗೆ ಪಾದಯಾತ್ರೆ ಹೋದರು. ಹಾಗೆ ಸಾಗುವಾಗ ಗ್ರಾಮೀಣರ ನೇರ ಸಂಪರ್ಕದಿಂದ ಅವರ ಹಲವಾರು ಸಮಸ್ಯೆಗಳನ್ನು ಆಲಿಸಿದರು. ಗ್ರಾಮೀಣರ ಹೀನ ಸಾಮಾಜಿಕ ಆರ್ಥಿಕ ಪರಿಸ್ಥಿತಿ ಕಂಡು ಅವರ ಹೃದಯ ಕಲಕಿತು. ಅದರ ಪರಿಹಾರಕ್ಕೆ ಗಾಂಧಿಮಾರ್ಗದ ಆಲೋಚನೆಯಲ್ಲಿ ತೊಡಗಿದರು.

ಆಂಧ್ರದ ತೆಲಂಗಾಣದಲ್ಲಿ ಕಮ್ಯುನಿಷ್ಟರು ಸಶಸ್ತ್ರ ದಂಗೆಗಳ ಮೂಲಕ ಜಮೀನ್ದಾರರನ್ನು ಕೊಂದು, ಭೂಹೀನರಿಗೆ ಭೂಮಿ ಹಂಚುವ ದೊಡ್ಡ ಚಳುವಳಿ ನಡೆದಿತ್ತು. ರಾಜ್ಯ ಸರ್ಕಾರ ಅವರ ದಮನಕ್ಕೆ ದೊಡ್ಡ ಸೇನೆ ಕಳುಹಿಸಿತ್ತು. ಭೀಕರ ಸಂಘರ್ಷವೇರ್ಪಟ್ಟಿತ್ತು.

ವಿನೋಬಾ ತೆಲಂಗಾಣಕ್ಕೆ ಹೋಗಿ ಜೈಲಿನಲ್ಲಿ ಕಮ್ಯುನಿಸ್ಟ್ ಮುಖಂಡರನ್ನು ಕಂಡು ವಿದ್ರೋಹಕ್ಕೆ ಕಾರಣವಾದ ವಿಚಾರಗಳನ್ನು ಗಂಭಿರವಾಗಿ ಚರ್ಚಿಸಿದರು. ಗ್ರಾಮದ ಶ್ರೀಮಂತರು ಜೀವಭಯದಿಂದ ನಗರಗಳಿಗೆ ವಲಸೆ ಹೋಗಿದ್ದರು. ವಿನೋಬಾ ಅವರು ಇದು ಪ್ರಜಾರಾಜ್ಯವಾದುದರಿಂದ ಶ್ರೀಮಂತರ



ಬಗ್ಗೆ ಒಳ್ಳೆಯ ಭಾವನೆಯನ್ನು ಹೊಂದಿ, ನಿಮ್ಮ ಹಕ್ಕೊತ್ತಾಯ ತಿಳಿಸಿ ಎಂದು ಕಮ್ಯುನಿಷ್ಟರಿಗೆ ಹೇಳಿದರು.

1951 ಏಪ್ರಿಲ್ 18 ಪಾದಯಾತ್ರೆಯ ಮೂರನೇ ದಿನ. ಅಂದು ಪೋಚಂಪಲ್ಲಿ ಎಂಬ ಚಿಕ್ಕ ಗ್ರಾಮದಲ್ಲಿ ಸಭೆ ನಡೆಯಿತು. ಅಲ್ಲಿಯ ಹರಿಜನ ರೈತರು 60 ಎಕರೆ ಭೂಮಿ ಕೊಡಿಸಿದರೆ ನೆಮ್ಮದಿಯಿಂದ ಬೇಸಾಯ ಮಾಡಿ ಜೀವನ ನಡೆಸಬಹುದೆಂದು ಮನವಿ ಪತ್ರ ನೀಡಿದರು. ವಿನೋಬಾ ಆ ಮನವಿಯನ್ನು ಸರ್ಕಾರಕ್ಕೆ ಕಳುಹಿಸುವ ಭರವಸೆ ಕೊಟ್ಟರು.

ಆ ಸಭೆಯಲ್ಲಿದ್ದ ಸಹೃದಯಿ ಜಮೀನ್ದಾರ ಶ್ರೀ ರಾಮಚಂದ್ರರೆಡ್ಡಿಯವರು 100 ಎಕರೆ ಜಮೀನನ್ನು ಹರಿಜನರಿಗೆ ದಾನ ಮಾಡಲು ವಿನೋಬಾ ಅವರೆದುರಿಗೆ ಒಪ್ಪಿ, ವಚನ ನೀಡಿದರು. ವಿನೋಬಾ ಅದನ್ನು 'ಭೂದಾನ ಯಜ್ಞ' ಎಂದು ಕರೆದರು. ಅದನ್ನು ಸಾಮಾಜಿಕ ಆರ್ಥಿಕ ಸಮಾನತೆ ಸಾಧಿಸಲು ಅಜೇಯ ಶಕ್ತಿ ಎಂದುಕೊಂಡರು. ಯಾವುದೇ ಶಾಸನ, ದಂಡ ಶಕ್ತಿಯ ಬಲಾತ್ಕಾರ ಸಂಘರ್ಷಗಳಿಲ್ಲದೆ ಪ್ರೇಮ ಪರಿಸರದಲ್ಲಿ ಶಾಂತಿಯುತ ಚಳುವಳಿಯಿಂದ ಭೂ ಸಮಸ್ಯೆ ಪರಿಹರಿಸಲು ಪಾದಯಾತ್ರೆ ಮುಂದುವರೆಸಿದರು. ಸಂತರ ಮನವಿಗೆ ಜಮೀನ್ದಾರರು ಸ್ಪಂದಿಸಿದರು. ಹೃದಯ ಪರಿವರ್ತನೆ, ಜೀವ ಪರಿವರ್ತನೆ, ಸಮಾಜ ಪರಿವರ್ತನೆಯು ಭೂದಾನ ಚಳುವಳಿಯಿಂದ ಆಯಿತು.

ಅವರು ಆಂಧ್ರದಲ್ಲಿ 35,000 ಎಕರೆ ದಾನವಾಗಿ ಪಡೆದರು. ಗಾಂಧಿ ಚಿಂತನೆಯ ಮುಖಾಂತರ ಬಡತನ ನಿರ್ಮೂಲನೆಯು ಅಂತ್ಯೋದಯದಿಂದ ಆಗಬೇಕೆಂದು ಜನರಿಗೆ ತಿಳಿ ಹೇಳಿದರು.

**'ಗ್ರಾಮದಾನ'**

ಪಾದಯಾತ್ರೆ ಸಾಗುವಾಗ ಉತ್ತರ ಪ್ರದೇಶದ ಮಂಗೋಟ್ ಗ್ರಾಮದ ನಿವಾಸಿಗಳೆಲ್ಲ ಭೂದಾನ ಆಂದೋಲನಕ್ಕೆ ನೆರವಾದರು. ಸಹಕಾರಿ ಬೇಸಾಯ ಪದ್ಧತಿ ಅನುಸರಿಸಲು ಒಪ್ಪಿದರು. ವಿನೋಬಾ ಅದನ್ನು 'ಗ್ರಾಮದಾನ' ಎಂದು ಕರೆದರು. ಉತ್ತರ ಪ್ರದೇಶದಲ್ಲಿ ಪಾದಯಾತ್ರೆ ಮಾಡಿ 5 ಲಕ್ಷ ಎಕರೆ ಜಮೀನು ಸಂಗ್ರಹಿಸಿದರು. ಬಿಹಾರದಲ್ಲಿ ಜಯಪ್ರಕಾಶ ನಾರಾಯಣ್ ಜೊತೆಗೂಡಿ ಪಾದಯಾತ್ರೆ ನಡೆಸಿ 21 ಲಕ್ಷ ಎಕರೆ ಜಮೀನು ಸಂಗ್ರಹಿಸಿದರು. ಚಾಂಡೀಲದ ಸರ್ವೋದಯ ಸಮ್ಮೇಳನಕ್ಕೆ ರಾಷ್ಟ್ರಪತಿ ಬಾಬು ರಾಜೇಂದ್ರ ಪ್ರಸಾದ್ ಬಂದಿದ್ದರು. ಅಲ್ಲಿ ಜಯಪ್ರಕಾಶ ನಾರಾಯಣರೊಡನೆ ಸಾವಿರಾರು ಸ್ವಯಂ ಸೇವಕರು ಸೇರಿ 'ಜೀವನದಾನ' ಸಂಕಲ್ಪ ಕೈಗೊಂಡರು.

**ಹರಿಜನರೊಡನೆ ವೈದ್ಯನಾಥ ದೇವಾಲಯ ಪ್ರವೇಶಕ್ಕೆ ತಡೆ.**

ವಿನೋಬಾ ಅವರು ಹರಿಜನರೊಂದಿಗೆ ದೇವಗಢದ ವೈದ್ಯನಾಥ ದೇವಾಲಯ ಪ್ರವೇಶಿಸಲು ಹೋದರು. ಪೂಜಾರಿಗಳು ಹರಿಜನ ಪ್ರವೇಶವನ್ನು ತಡೆದರು. ವಿನೋಬಾ ಸಂಗಡಿಗರೊಂದಿಗೆ ಪ್ರತಿಭಟಿಸಿ ಲಾಟಿ ಏಟು ತಿಂದರು. ವಿನೋಬಾರು 'ಈ ವರ್ತನೆ ಭಾರತದ ರಾಜ್ಯಾಂಗದ ವಿರೋಧವಾದ ಗೂಂಡಾಗಿರಿ. ಇದನ್ನು ದೇವರು ಒಪ್ಪಲಾರ' ಎಂದು ಹೇಳಿದರು.

ಪಾದಯಾತ್ರೆ ಮುಂದುವರೆಸುತ್ತ ಪಶ್ಚಿಮ ಬಂಗಾಳ, ಒರಿಸ್ಸಾ, ತಮಿಳುನಾಡು, ಕೇರಳ, ಕರ್ನಾಟಕ, ಮಹಾರಾಷ್ಟ್ರ, ರಾಜಸ್ಥಾನ, ಗುಜರಾತ್, ಪಂಜಾಬ್, ಕಾಶ್ಮೀರ, ಮಧ್ಯಪ್ರದೇಶ, ಅಸ್ಸಾಂ ರಾಜ್ಯಗಳಲ್ಲಿ 'ಭೂದಾನ ಯಜ್ಞ' ನಡೆಸಿದರು. ಭೂದಾನದ ಜೊತೆಯಲ್ಲಿ ಶ್ರೀಮಂತರಿಂದ 'ಸಂಪತ್ತಿನದಾನ', ಶ್ರಮಿಕರಿಂದ 'ಶ್ರಮದಾನ', ಬುದ್ಧಿಜೀವಿಗಳಿಂದ 'ಸಮಯದಾನ', ಉಳ್ಳವರಿಂದ ವ್ಯವಸಾಯಕ್ಕೆ ಅಗತ್ಯವಾದ 'ಸಾಧನದಾನ'– ಹೀಗೆ ವಿವಿಧ ದಾನ ಪಡೆದು ವಿನೋಬಾ ದಾನದ ಅರ್ಥ ಹಿಗ್ಗಿಸಿದರು. ಅವರು 'ಹಿಂಸಾ ಶಕ್ತಿಗೆ ವಿರೋಧವಾದ, ದಂಡಶಕ್ತಿಗೆ ಭಿನ್ನವಾದ ಲೋಕಶಕ್ತಿ ಅಥವಾ ಜನಶಕ್ತಿ ನಿರ್ಮಾಣ ಮಾಡುವುದೇ ಸ್ವರಾಜ್ಯದ ನಿಜವಾದ ಅಸ್ತಿಭಾರ' ಎಂದರು.

ವಿನೋಬಾ ಅವರು ಭಾರತಾದಾದ್ಯಂತ 70,000 ಕಿ.ಮೀ. ಪಾದಯಾತ್ರೆ ಮಾಡಿದರು. 42 ಲಕ್ಷ ಎಕರೆ ಭೂಮಿ ದಾನವಾಗಿ ಪಡೆದು ಭೂಹೀನರಿಗೆ ಹಂಚಿದರು. 13 ವರ್ಷ, 3 ತಿಂಗಳು, 3 ದಿನಗಳು 'ಭೂದಾನಯಜ್ಞ' ನಡೆಸಿ ಪವನಾರಿನ ಬ್ರಹ್ಮವಿದ್ಯಾ ಮಂದಿರಕ್ಕೆ 1964 ರಲ್ಲಿ ಹಿಂದಿರುಗಿದರು. ಈ ವಿಶ್ವ ಅದುವರೆಗೆ ಕಂಡು ಕೇಳರಿಯದ ಭೂದಾನದಿಂದ 'ಸರ್ವೋದಯ' ಧ್ಯೇಯ ಜನಮಾನಸದಲ್ಲಿ ಮೂಡಿತು. ಗ್ರಾಮ ಸ್ವರಾಜ್ಯದ ನಿಜರೂಪ ಗೋಚರವಾಯಿತು; ಗ್ರಾಮಾಭಿವೃದ್ಧಿಯ ಅರಿವಾಯಿತು.

**ಚಂಬಲ್ ಕಣಿವೆಯ ಡಕಾಯಿತರು ಶರಣಾದುದು.**

1960 ರಲ್ಲಿ ಮಧ್ಯಪ್ರದೇಶದಲ್ಲಿ ಗಲ್ಲು ಶಿಕ್ಷೆಗೆ ಒಳಗಾಗಿ ಜೈಲಿನಲ್ಲಿದ್ದ ಡಕಾಯಿತ ಮಾನಸಿಂಹನ ಮಗ ಡಕಾಯಿತ ತಹಸೀಲ್ದಾರ್ ಸಿಂಹನು ವಿನೋಬಾರಿಗೆ ಪತ್ರ ಬರೆದನು. ಅವನನ್ನು ಕಂಡು ಮಾತಾಡಲು ಮಧ್ಯ ಪ್ರದೇಶದವನೇ ಆದ ಜನರಲ್ ಯಧುನಾಥ ಸಿಂಹನನ್ನು ವಿನೋಬಾ ಕಳುಹಿಸಿದರು. ತಹಸೀಲ್ದಾರ್ ಸಿಂಹನ ಇಚ್ಛೆಯಂತೆ ವಿನೋಬಾ ಚಂಬಲ್ ಕಣಿವೆಗೆ ಹೋದರು. ಭಿಂಡ, ಮುರೈನ ಪ್ರದೇಶದಲ್ಲಿ ತಹಸೀಲ್ದಾರ್‌ನ ಸಹಚರರನ್ನು ಕಂಡು ಮಾತಾಡಿದರು. ಅಲ್ಲಿಯ ಪ್ರತಿ ಊರಿನ ಪ್ರತಿ ಮನೆಗೆ ಹೋಗಿ ಅವರ ದಾರುಣ ಕಥೆ ಕೇಳಿದರು. ಡಕಾಯಿತರಿಂದ ಅನಾಹುತಕ್ಕೆ ಒಳಗಾದ ಊರುಗಳು, ಮನೆಮನೆಯ ಗೋಳು ಕೇಳಿದರು. ಅದೇ ರೀತಿ ಡಕಾಯಿತ ಕುಟುಂಬದವರ ದೀನ ದರಿದ್ರಾವಸ್ಥೆ ಕಂಡು ನೊಂದರು. ಮಾನಸಿಂಹನ ಮಾವನ ಮನೆಯಲ್ಲಿ ಅವನ ಪತ್ನಿ ಬಡತನದ, ಆಧಾರ ರಹಿತ ಬದುಕಿನ ತನ್ನ ಘೋರ ಸಮಸ್ಯೆ ಹೇಳಿದಳು. ಜೀವನ ನಡೆಸಲಾಗದ ಸ್ಥಿತಿ ತಿಳಿಸಿ ಅತ್ತಳು.

ಒಂದು ದಿನ ಜನರಲ್ ಯಧುನಾಥಸಿಂಹನ ಮಾತು ಅನುಸರಿಸಿ ಡಕಾಯಿತ ಲುಕ್ಕಾ ಮತ್ತು 10 ಜನ ಅವನ ಜೊತೆಯ ಡಕಾಯಿತರು ಬಂದರು. ವಿನೋಬಾ ಅವರಿಗೆ ತಮ್ಮ ತಮ್ಮ ಬಂದೂಕನ್ನು ಸಮರ್ಪಣೆ ಮಾಡಿ ಶರಣಾದರು. ಸರ್ಕಾರ ಅವರನ್ನು ಹಿಡಿದುಕೊಟ್ಟವರಿಗೆ, ಪ್ರತಿ ಡಕಾಯಿತನ ಮೇಲೆ ಇಪ್ಪತ್ತು ಸಾವಿರ ರೂಪಾಯಿ ಇನಾಮು ಘೋಷಿಸಿತ್ತು; ಅಂತಹವರು ವಿನೋಬಾರಿಗೆ ಶರಣಾದುದು ಅಹಿಂಸಾಫಲದ ಪವಾಡ!

ಡಕಾಯಿತರು ವಿನೋಬಾರನ್ನು 'ಬಾಬಾ' ಎಂದು ಕರೆದರೆ, ವಿನೋಬಾ ಆ ಡಕಾಯಿತರನ್ನು 'ಮಿತ್ರರು' ಎಂದು ಆತ್ಮೀಯವಾಗಿ ಕರೆಯುತ್ತಿದ್ದರು. ಆ ಮಿತ್ರರಲ್ಲಿ 18–20 ಜನರು ಜನರಲ್ ಯಧುನಾಥ ಸಿಂಹನೊಂದಿಗೆ ಜೇಲಿಗೆ ಹೋದರು. ಮಾರನೇ ದಿನ ವಿನೋಬಾ ಜೇಲಿಗೆ ಹೋಗಿ ಅವರಿಗೆ ಸದ್ಬೋಧನೆ ಮಾಡಿದರು.

**ವಿನೋಬಾ ಜನ್ಮದಿನ 'ಭೂಜಯಂತಿ'**

75 ವರ್ಷ ತುಂಬಿದ ವಿನೋಬ 'ಕ್ಷೇತ್ರ ಸಂನ್ಯಾಸ' ಸ್ವೀಕರಿಸಿ ಪೌನಾರಿನ ಪರಂಧಾಮ ಆಶ್ರಮದಲ್ಲಿ ನೆಲೆ ನಿಂತರು. ಮೌನ, ಚಿಂತನಾಗೋಷ್ಠಿ, ಉಪನ್ಯಾಸ, ಶಿಕ್ಷಣದ ಪುನರ್ರಚನೆ, ಭಾಷೆಗಳ ಸಂಘರ್ಷ ನಿವಾರಣೆ, ಗೋಹತ್ಯಾ ನಿಷೇಧ – ಚಳುವಳಿಗಳಲ್ಲಿ ಮಗ್ನರಾದರು. ಅವರು ತಮ್ಮ ಜನ್ಮದಿನವನ್ನು 'ಭೂ ಜಯಂತಿ' ಎಂದು ಕರೆಯುತ್ತಿದ್ದರು. ಅವರ 75 ನೇ ವರ್ಷದ ಸಂದರ್ಭದಲ್ಲಿ ಸಂಗ್ರಹವಾದ 75 ಲಕ್ಷ ರೂಪಾಯಿಯನ್ನು ರಾಜ್ಯಗಳಲ್ಲಿ ನಡೆಯುತ್ತಿದ್ದ ಗ್ರಾಮ ಸ್ವರಾಜ್ಯ ಚಳುವಳಿಗೆ ದಾನವಾಗಿ ನೀಡಿದರು.

1924 ರಲ್ಲಿ ವರ್ಧಾದಲ್ಲಿ ಬಂದು ನೆಲಸಿದ ವಿನೋಬಾ ಅಲ್ಲಿ ಈ ಕೆಳಸೂಚಿಸಿರುವ ರಚನಾತ್ಮಕ ಕೇಂದ್ರಗಳನ್ನು ಸ್ಥಾಪಿಸಿದರು. 1. ಮಹಿಳಾ ಆಶ್ರಮ 2. ದತ್ತಪುರಿಯ ಕುಷ್ಠ ರೋಗಿಗಳ ಸೇವಾ ಕೇಂದ್ರ 3. ವರ್ಧಾದ ಲಕ್ಷ್ಮೀನಾರಾಯಣ ಮಂದಿರ, ಗೀತಾ ಮಂದಿರ 4. ನಲವಡಿಯ ಗ್ರಾಮ ಸೇವಾ ಕೇಂದ್ರ 5. ಮಗನವಾಡಿಯ ಗ್ರಾಮೋದ್ಯೋಗ ಕೇಂದ್ರ 6. ಗೋ ಸೇವಾ ಕೇಂದ್ರ

ಸ್ವಲ್ಪ ಕಾಲದ ನಂತರ ಅವರು ವರ್ಧಾದಿಂದ 12 ಮೈಲಿ ದೂರದ ಪವನಾರಕ್ಕೆ ವಿಶ್ರಾಂತಿಗೆಂದು ಹೋದರು. ಅಲ್ಲಿಯೇ 12 ವರ್ಷ ಕಳೆದು 15–11–1982 ರಂದು ಪ್ರಕೃತಿಯಲ್ಲಿ ಲೀನವಾದರು. ಸರ್ವೋದಯದ ಚುಕ್ಕೆಯಾಗಿ ಆಗಸದಲ್ಲಿ ಮಿನುಗುತ್ತಿರುವರು.

■

**ಗ್ರಂಥ ಋಣ**

ಕೆ.ಎಸ್. ನಾರಾಯಣಸ್ವಾಮಿ, ಆಚಾರ್ಯ ವಿನೋವ ಭಾವೆ, ಸಪ್ನ ಬುಕ್ ಹೌಸ್, ಬೆಂಗಳೂರು 2011

VINOBA Sage of The Age, Usha, Karnataka Gandhi Smarak Nidhi, Bangalore, 2018

ವೈಯಕ್ತಿಕ ಸತ್ಯಾಗ್ರಹಿ, ಗಂಗಾಲಕ್ಷ್ಮೀ, ರೆಪ್ಲಿಕಾ ಆಫ್ ಸೆಟ್ ಪ್ರಿಂಟರ್ಸ್, ಬೆಂಗಳೂರು.




# ಆಚಾರ್ಯ ವಿನೋಬಾ ಮತ್ತು ಕುವೆಂಪು

ಆಚಾರ್ಯ ವಿನೋಬಾ ಭಾವೆ ಅವರು ಪಾದಯಾತ್ರೆ ಮಾಡುತ್ತ 13–9–1957 ರಂದು ಪಿರಿಯಾ ಪಟ್ಟಣದ ಆನೆಚೌಕೂರಿನಲ್ಲಿ ಇಳಿದುಕೊಂಡಿದ್ದರು. ಅವರನ್ನು ನೋಡಲು ಕುವೆಂಪು ಸಂಸಾರ ಸಮೇತ ಹೋಗಿದ್ದರು. ಕವಿಗಳು ಪೌರಾಣಿಕ ಋಷಿಯಂತೆ ಕಂಡ ಸಂತ ವಿನೋಬಾ ಅವರಿಗೆ ಕೈ ಮುಗಿದರು. ಅವರಿಗೆ 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದ ಪ್ರತಿ ನೀಡಿದರು. ಅವರು ಪುಸ್ತಕ ಬಿಚ್ಚಿ ನೋಡಿ 'ಕನ್ನಡ ಲಿಪಿ ಮುತ್ತು ಪೋಣಿಸಿದಂತೆ ತುಂಬ ಚೆಲುವಾಗಿದೆ' ಎಂದರು. ಕುವೆಂಪು ಇಂಗ್ಲಿಷಿನಲ್ಲಿ ವಿವರಿಸಿದಾಗ ಅವರು 'ಕನ್ನಡದಲ್ಲಿಯೆ ಮಾತಾಡಿ ನನಗೆ ಅರ್ಥವಾಗುತ್ತದೆ ಎಂದು ಹೇಳಿದರು. ಮುನ್ನುಡಿಯ ಕೆಲವು ಸಾಲುಗಳನ್ನು ಓದಿದರು. (ಅವರ ತಾಯಿ ರುಕ್ಮಿಣಿದೇವಿ ಜಮಖಂಡಿಯವರು. ಮನೆಯಲ್ಲಿ ಮರಾಠಿ ಭಜನೆಗಳ ಜೊತೆಗೆ ಕನ್ನಡ ಭಜನೆ ಹೇಳುತ್ತಿದ್ದರು.)

ಕುವೆಂಪು ಅವರ ಮಕ್ಕಳು ಇಂದುಕಲಾ ಮತ್ತು ತಾರಿಣಿ 'ಅಂತರತಮ ನೀ ಗುರು' ಹಾಡಿದರು. ಕವಿಗಳು ಅದರ ಅರ್ಥ ವಿವರಿಸಿದರು. "ತಾವು ತಮ್ಮ ಮನೆ 'ಉದಯರವಿ'ಗೆ ಬರುವುದನ್ನು ವಿಶೇಷ ಕೃಪೆ ಎಂದು ಭಾವಿಸುತ್ತೇನೆ" ಎಂದು ಹೇಳಿ ಆಹ್ವಾನಿಸಿದರು. ವಿನೋಬ ಬರಲು ಒಪ್ಪಿದರು.

ಕುವೆಂಪು ಅವರು ವಿನೋಬಾ ಅವರಿಗೆ ಕಾಣಿಕೆಯಾಗಿ ನೀಡಿದ 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದಲ್ಲಿ 'ಅಗ್ನಿಶೀತ ಚರಣಕೆ' ಎಂಬ ಕವನ ಬರೆದಿದ್ದಾರೆ. ವಿನೋಬ ಅವರಲ್ಲಿಯ ಅಗ್ನಿಯಂತಹ ಕ್ರಾಂತಿಕಾರಿ ಚಿಂತನೆಯೂ ಸಂತನ ಶಾಂತ ಅಹಿಂಸಾವ್ರತದ ನಡೆನುಡಿಯು ಒಂದಾಗಿ ಮೇಳೈಸಿರುವುದನ್ನು ಸೂಕ್ಷ್ಮವಾಗಿ ಗಮನಿಸಿದ ಕವಿಯು 'ಅಗ್ನಿಶೀತ ಚರಣ!' ಎಂದು ಬಣ್ಣಿಸಿದ್ದಾರೆ. ವಾಮನನಂತೆ ಬಂದಿರುವ ಈ ತ್ರಿವಿಕ್ರಮನಿಗೆ ನಮಸ್ಕಾರ ಎಂದು ಅನನ್ಯ ನಮ್ರತೆಯಿಂದ ಕೈ ಮುಗಿದಿದ್ದಾರೆ. ಆ ಕವನದ ಪೂರ್ಣಪಾಠ ಹೀಗಿದೆ:

**'ಅಗ್ನಿಶೀತ ಚರಣಕೆ'**
**ಮನುಜ ರೂಪವ ಧರಿಸಿ ಧರೆಗಿಳಿದು ಬಂದಿರುವ**
**ದೇವಸೂರ್ಯ ಕರುಣ;**
**ಕವಿದಿರುವ ಕತ್ತಲೆಯೊಳೊಂದೆ ಸಂಚರಿಸುತಿದೆ**
**ಅಮೃತ ಚಂದ್ರಕಿರಣ;**
**ಪಾದಯಾತ್ರೆಯೊಳಿರುವ ಶ್ರೀ ವಿನೋಬನ ಅಮರ**
**ಅಗ್ನಿಶೀತ ಚರಣ!**
**ಇಂದು ವಾಮನನಂತೆ ಬಂದೀ ತ್ರಿವಿಕ್ರಮಗೆ**
**ಕವಿಯ ನಮನ ಅನೃಣ!**

* * *

ವಿನೋಬಾ ಅವರು ಅದೇ ತಿಂಗಳ 21–22 ರಂದು ಮೈಸೂರಿನ ಬಳಿಯ ಇಲವಾಲದಲ್ಲಿ ಸರ್ವೋದಯ ಸಮ್ಮೇಳನ ನಡೆಸಿದರು. ಅದಕ್ಕೆ ರಾಷ್ಟ್ರಪತಿ ರಾಜೇಂದ್ರ ಪ್ರಸಾದ್, ಪ್ರಧಾನಿ ಪಂಡಿತ್ ಜವಹರಲಾಲ್ ನೆಹರು ಮುಂತಾದವರು ಭಾಗವಹಿಸಿದ್ದರು. ಆ ಸಮ್ಮೇಳನದಲ್ಲಿ ಎಲ್ಲರೂ ಸರ್ವಾನುಮತದಿಂದ ಗ್ರಾಮದಾನದ ವಿಚಾರವನ್ನು ಬೆಂಬಲಿಸಿದರು. ಘೋಷಣಾ ಪತ್ರದಲ್ಲಿ 'ಗ್ರಾಮದಾನದ ವಿಚಾರಕ್ಕೆ ಎಲ್ಲರೂ ಬೆಂಬಲ ಕೊಡಬೇಕು. ಏಕೆಂದರೆ ಅದರಲ್ಲಿ ನೈತಿಕ ಉನ್ನತಿಯೊಂದಿಗೆ ಭೌತಿಕ ಉನ್ನತಿಯು ಆಗುವುದು' ಎಂದು ಹೇಳಲಾಗಿತ್ತು.

ಯೋಗಿ ವಿನೋಬಾ ಅವರು 25–9–1957 ರಂದು ಇಲವಾಲ ದಾಟಿ ಬರುವಾಗ ಕುವೆಂಪು ನಮಸ್ಕರಿಸಿ 'ಉದಯರವಿ' ಮನೆಗೆ ಕರೆದುಕೊಂಡು ಬಂದರು. ಆ ಸಂದರ್ಭದ ತಮ್ಮ ಭಾವಾನಂದವನ್ನು 'ಆಗ ನಡೆಯುತ್ತಿದ್ದುದು ಒಂದು ಅದ್ಭುತ ವಿಶ್ವಘಟನೆಯಂತೆ ನನ್ನ ಸಮಸ್ತ ಪ್ರಜ್ಞೆಯನ್ನು ಆಕ್ರಮಿಸಿತು.' ಎಂದು ವ್ಯಕ್ತಪಡಿಸಿದ್ದಾರೆ.

ಕುವೆಂಪು ಅವರ ಮನೆಯನ್ನು ಅವರ ಶ್ರೀಮತಿ ಹೇಮಾವತಿ ಮತ್ತು ಮಕ್ಕಳು ತಳಿರು ತೋರಣ ಕಟ್ಟಿ, 'ಸ್ವಾಗತಂ ಶ್ರೀ ವಿನೋಬಾಜಿಗೆ' ಎಂದು ರಂಗೋಲಿಯಲ್ಲಿ ಬರೆದು ಅಲಂಕರಿಸಿದ್ದರು. ದೇವರ ಮನೆಯನ್ನು ಹೂವಿನಿಂದ ಶೃಂಗರಿಸಿದ್ದರು. ವಿನೋಬಾಜಿಯವರು ಬರಲು, ಕುವೆಂಪು ಕುಟುಂಬದ ಎಲ್ಲರೂ ನಮಸ್ಕರಿಸಿ ಸ್ವಾಗತಿಸಿದರು. ವಿನೋಬಾಜಿ ನಡುಮನೆಯಲ್ಲಿ ಕುಳಿತು 'ಶ್ರೀ ರಾಮಾಯಣ ದರ್ಶನಂ'ನ ಹಸ್ತಪ್ರತಿಗಳನ್ನು ಮುಟ್ಟಿ ಎತ್ತಿ ನೋಡಿದರು. ಶ್ರೀಮತಿ ಹೇಮಾವತಿ ಅವರು ಜೇನು, ಮೊಸರು ನೀಡಿದಾಗ ಶ್ರೀ ರಾಮಾಯಣ ದರ್ಶನಂ ನೋಡುತ್ತ 'ಈ ಪ್ರಸಾದ ಸಾಕು, ಅದು ಏಕೆ' ಎಂದರು. ಕುವೆಂಪು ಅವರ ಮಕ್ಕಳು ಹಾಡಿದ 'ನಿನ್ನಡಿದಾವರೆಯಲಿ' ಗೀತೆ ಕೇಳಿದರು. ಕುವೆಂಪು ಅವರ ದೇವರ ಮನೆ, ಓದುವ ಕೊಠಡಿ ನೋಡಿ ಆಶೀರ್ವದಿಸಿ, ಪಾದಯಾತ್ರೆ ಮುಂದುವರೆಸಿದರು.

ಕುವೆಂಪು ಅವರು ಆ ಶುಭದಿನದಂದು ವಿನೋಬಾ ಅವರ ಪಾದಯಾತ್ರೆಯ ಅಮೃತರೇಖೆ ತಮ್ಮ ಮನೆಯನ್ನು ಪ್ರವೇಶಿಸಿ ಪವಿತ್ರವಾಗಿಸಿದ ಭವ್ಯಾನಂದದಲ್ಲಿ ರಚಿಸಿದ ಕವನ 'ಉದಯರವಿಯಲ್ಲಿ ಸರ್ವೋದಯ ರವಿ!' ಅದರ ಪೂರ್ಣಪಾಠ ಹೀಗಿದೆ:

**ಹೇ ಜಗದ್ ದೀನಬಂಧು,**
**ಮನೆಯೆ ಕ್ಷೇತ್ರವಾಯಿತಿಂದು**
**'ಉದಯರವಿ'ಗೆ ನೀನು ಬಂದು;**
**ಕೆರೆಯೆ ಆಯ್ತು ಮಹಾಸಿಂಧು,**
**ಪೂಜ್ಯ ಓ ತಪೋಧನ!**
**ಪಾದಯಾತ್ರೆಯಮೃತರೇಖೆ**
**ಮನೆಯ ಮೇಲೆ ಹಾಯ್ದುದಕ್ಕೆ**
**ನಿನಗನಂತ ವಂದನಾ,**
**ಮುಹುರನಂತ ವಂದನಾ!**

(ವಿವರಗಳಿಗೆ ನೋಡಿ: ತಾರಿಣಿ ಚಿದಾನಂದ, 'ಮಗಳು ಕಂಡ ಕುವೆಂಪು' ಪು. 42–50)

■



# ಗಾಂಧಿ ಚಿಂತನೆ 03

– ಜಗದೀಶ್ ಕೊಪ್ಪ

ಗಾಂಧೀಜಿಯವರ ದೃಷ್ಟಿಕೋನದಲ್ಲಿ ಒಂದು ದೇಶದ ಪ್ರಗತಿ ಅಥವಾ ಸಾಮಾಜಿಕ ಸಮಾನತೆಯ ಪ್ರಭಾವಗಳನ್ನು ಅಳೆಯಬೇಕಾದರೆ, ಅಲ್ಲಿನ ನಾಗರೀಕರಿಗೆ ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಒಳಿತಾಗಿದೆಯೆ' ಎಂಬ ಪ್ರಶ್ನೆ ಸದಾ ಮಾನದಂಡವಾಗಿರಬೇಕು ಎಂಬುದಾಗಿತ್ತು.

ರಸ್ಕಿನ್ ರವರು ಬರೆದ "ಅನ್ ಟು ದಿಸ್ ಲಾಸ್ಟ್" ಕೃತಿಯಿಂದ ಗಾಂಧೀಜಿಯವರು ಬಹಳಷ್ಟು ಪ್ರಭಾವಿತರಾಗಿದ್ದರು. ಆ ಕೃತಿಯಲ್ಲಿನ ಒಂದು ವಾಕ್ಯವಾದ " ತನ್ನ ಸಾಮರ್ಥ್ಯಕ್ಕೆ ಅನುಸಾರವಾಗಿ ಪ್ರತಿಯೊಬ್ಬನಿಂದ ಅಥವಾ ಆತನ ಅಗತ್ಯಕ್ಕೆ ಅನುಸಾರವಾಗಿ ಪ್ರತಿಯೊಬ್ಬನಿಗೂ" ಈ ತತ್ವವನ್ನು ಗಾಂಧೀಜಿಯವರು ಮನಸಾರೆ ಒಪ್ಪಿಕೊಂಡಿದ್ದರು. ತಮ್ಮ ಆತ್ಮಕಥೆಯಲ್ಲಿ ನನ್ನನ್ನು ಮಂತ್ರಮುಗ್ಧಗೊಳಿಸಿದ ಕೃತಿ ಎಂದು ಹೇಳಿಕೊಂಡಿರುವ ಗಾಂಧೀಜಿಯವರು, ಈ ತತ್ವವನ್ನು ಆಧರಿಸಿ ತಮ್ಮದೇ ಆದ ಮೂರು ಚಿಂತನೆಗಳನ್ನು ನಮ್ಮ ಮುಂದಿರಿಸಿದ್ದಾರೆ. ಅವುಗಳಲ್ಲಿ

**ಒಂದನೆಯದು; ವ್ಯಕ್ತಿಯೊಬ್ಬನ ಒಳಿತು ಸಮಾಜದ ಒಳಿತಿನಲ್ಲಿ ಅಡಗಿದೆ.**

**ಎರಡನೆಯದು; ಸಮಾಜಕ್ಕೆ ಉಪಯೋಗುವ ಎಲ್ಲಾ ವೃತ್ತಿಗಳಿಗೆ ಸಾಮಾಜಿಕವಾಗಿ ಒಂದೇ ಮೌಲ್ಯವಿರುತ್ತದೆ.**

**ಮೂರನೆಯದು; ಶ್ರಮಾಧಾರಿತ ಜೀವನ ಅಂದರೆ, ಕೃಷಿಕ, ಕಾರ್ಮಿಕ, ಕರಕುಶಲ ಕಾಯಕದಲ್ಲಿ ತೊಡಗಿಕೊಂಡಿರುವವರ ಜೀವನ ಸಮಾಜದಲ್ಲಿ ಶ್ರೇಷ್ಠವಾದದು ಮತ್ತು ಗೌರವಯುತವಾದುದು.**

ನೈತಿಕ ಮೌಲ್ಯವನ್ನು ನಿರ್ಲಕ್ಷಿಸುವ ಅಥವಾ ತಳ್ಳಿಹಾಕುವ ಅರ್ಥವ್ಯವಸ್ಥೆಯ ಕುರಿತಾಗಿ ಗಾಂಧೀಜಿಯವರಿಗೆ ಯಾವುದೇ ರೀತಿಯ ಒಲವಿರಲಿಲ್ಲ. ಹಣವನ್ನು ಪೂಜಿಸುತ್ತಾ ದುರ್ಬಲರನ್ನು ತುಳಿದು ಸಂಪತ್ತನ್ನು ದೋಚುವ ಆರ್ಥಿಕತೆ ಸುಳ್ಳಿನಿಂದ ಕೂಡಿದೆ. ಅದು ಒಳಗೊಳ್ಳುವ ವಿಜ್ಞಾನ ಕೂಡ ಮಾರಕವಾದುದು ಎಂದು ಹೇಳಿದ ಅವರು, ಸಾಮಾಜಿಕ ನ್ಯಾಯವನ್ನು ಎತ್ತಿ ಹಿಡಿಯುವ ಆರ್ಥಿಕತೆ ಎಲ್ಲರ ಒಳಿತನ್ನು ಸಾಧಿಸುತ್ತದೆ ಎನ್ನುತ್ತಿದ್ದರು.

ಒಂದು ಪರಿಪೂರ್ಣ ನಾಗರೀಕ ಸಮಾಜ ಹೇಗಿರಬೇಕೆಂಬ ಕಲ್ಪನೆ ಗಾಂಧೀಜಿಯವರಿಗಿತ್ತು. ಈ ಜಗತ್ತಿನಲ್ಲಿ ಹುಟ್ಟಿನಿಂದ ಎಲ್ಲರೂ ಸಮಾನರು. ಅವರಲ್ಲಿ ಒಂದೇ ಬಗೆಯ ಸಾಮರ್ಥ್ಯ ಇಲ್ಲದಿರಬಹುದು ಆದರೆ, ಈ ಭೂಮಿಯ ಮೇಲೆ ಮನುಷ್ಯ ಜೀವಿಗಳಾಗಿ ಹುಟ್ಟಿದ ಮೇಲೆ ಅವರಿಗೆ ಸಮಾನ ಅವಕಾಶಗಳ ಹಕ್ಕುಗಳಿವೆ ಎಂಬುದು ಗಾಂಧೀಜಿಯವರ ನಿಲುವಾಗಿತ್ತು.

ಪ್ರತಿಯೊಬ್ಬನಿಗೂ ಸಮತೋಲನವಾದ ಆಹಾರ, ಘನತೆಯಿಂದ ವಾಸ ಮಾಡಲು ಅನುಕೂಲವಾಗುವಂತಹ ಮನೆಯನ್ನು ಪಡೆಯುವ ಹಕ್ಕು, ತಮ್ಮ ಮಕ್ಕಳಿಗೆ ಸಮಾನ ಶಿಕ್ಷಣ ಪಡೆಯುವ ಹಕ್ಕಿದೆ, ಆರೋಗ್ಯ ಸೇವೆ ಪಡೆಯುವ ಹಕ್ಕಿದೆ ಎಂದು ಪ್ರತಿಪಾದಿಸಿದ ಗಾಂಧೀಜಿಯವರು ಧರ್ಮ, ಜಾತಿ, ಪ್ರಾದೇಶಿಕ ಗಡಿಗಳಾಚೆ ನಿಂತು ಒಬ್ಬ ವ್ಯಕ್ತಿ ಮತ್ತೊಬ್ಬ ವ್ಯಕ್ತಿಯನ್ನು ಸಹಾನುಭೂತಿಯಿಂದ ನೋಡಬೇಕು ಎಂದು ಹೇಳಿದ ಮಾತು ಅವರ ವಿಶ್ವಮಾನವ ಪ್ರಜ್ಞೆಗೆ ಸಾಕ್ಷಿಯಾಗಿದೆ.

ಗಾಂಧೀಜಿಯವರು ಬದುಕಿದ್ದ ಕಾಲಘಟ್ಟದಲ್ಲಿ ಭಾರತದ ಜನಸಂಖ್ಯೆ ಸುಮಾರು ಮುವತ್ತು ಕೋಟಿಯ ಆಸು ಪಾಸಿನಲ್ಲಿತ್ತು. ಅನಕ್ಷರತೆ ಮತ್ತು ಬಡತನ ಎಲ್ಲೆಡೆ ತಾಂಡವಾಡುತ್ತಿತ್ತು. ಅವರ ಮುಂದೆ ಬ್ರಿಟಿಷರ ದಾಸ್ಯದಿಂದ ಭಾರತವನ್ನು ಮುಕ್ತಗೊಳಿಸುವುದರ ಜೊತೆಗೆ ಭಾರತದ ಜನತೆಯನ್ನು ಬಡತನ ಮತ್ತು ಹಸಿವಿನಿಂದ ಮುಕ್ತಗೊಳಿಸುವ ಸವಾಲು ಕೂಡ ಇತ್ತು. ಈ ಎರಡು ಸವಾಲುಗಳನ್ನು ಸಮಾನಂತರವಾಗಿ ಹೆಗಲ ಮೇಲೆ ಹೊತ್ತು ಹೋರಾಡಿದ ಮಹಾತ್ಮ ಅವರು.

ಜಾತಿ ಮತ್ತು ಬಡವ ಮತ್ತು ಬಲ್ಲಿದ ಎಂಬ ತಾರತಮ್ಯವಿಲ್ಲದೆ ಎಲ್ಲರಿಗೂಸಮಾನ ಉದ್ಯೋಗ ನೀಡುವ ಸಾಧನವೆಂದರೆ, ಚರಕ ಎಂಬುದು ಅವರ ಬಲವಾದ ನಂಬಿಕೆಯಾಗಿತ್ತು. ಹಾಗಾಗಿ ಅವರು ಸ್ವಾತಂತ್ರ್ಯ ಹೋರಾಟದ ಜೊತೆಗೆ ಖಾದಿ ಮತ್ತು ಚರಕಕ್ಕೆ ವಿಶೇಷ ಆದ್ಯತೆಯನ್ನು ನೀಡಿದರು. ಕನಿಷ್ಠ ಮೂಲಭೂತ ಸೌಕರ್ಯಗಳಿಲ್ಲದ ಕಡುಬಡುವನೊಬ್ಬ ಅಥವಾ ಕುಟುಂಬವೊಂದು ಅತ್ಯಂತ ಘನತೆಯಿಂದ ಬದುಕು ಕಟ್ಟಿಕೊಳ್ಳಲು ಇದರಿಂದ ಸಾಧ್ಯ ಜೊತೆಗೆ ಚರಕ ಭಾರತದ ಪ್ರತಿ ಗುಡಿಸಲಿಗೂ ಬೆಳಕು ತರುವ ಸಾಧನ ಎಂದು ಅವರು ಹೇಳುತ್ತಿದ್ದರು.

ಮಿತವಾದ ಹಾಗೂ ಸರಳ ಬದುಕಿಗೆ ಮಹತ್ವ ನೀಡಿದ ಅವರು ಉದ್ಯೋಗ ಮತ್ತು ಆರ್ಥಿಕ ವ್ಯವಹಾರಗಳಲ್ಲಿ ನೈತಿಕತೆ ಮತ್ತು ಪ್ರಾಮಾಣಿಕತೆ ಇರಬೇಕೆಂದು ಪದೇ ಪದೇ ಒತ್ತಿ ಹೇಳುತ್ತಿದ್ದರು. ಗ್ರಾಹಕನೊಬ್ಬ ಹಣವನ್ನು ಖರ್ಚುಮಾಡುವ ಮುನ್ನ ತಾನು ಕೊಳ್ಳಬಯಸುವ ವಸ್ತುವಿನ ಬಗ್ಗೆ ಯೋಚಿಸಬೇಕು, ಅದರ ಉಪಯುಕ್ತತೆ, ಅದರಿಂದ ತನಗಾಗುವ ಲಾಭ ಕುರಿತು ಗಹನವಾಗಿ ಯೋಚಿಸಬೇಕು. ಕೇವಲ ವಿಲಾಸಿ ಜೀವನ ಅಥವಾ ಐಷಾರಾಮಿ ಬದುಕಿಗಾಗಿ ಕೊಳ್ಳಬಾರದು ಎನ್ನುತ್ತಿದ್ದರು. ಅದೇ ರೀತಿ ವ್ಯಾಪಾರಸ್ಥರು ಯಾವ ಕಾರಣಕ್ಕೂ ಗ್ರಾಹಕರನ್ನು ಶೋಷಿಸಬಾರದು ಎನ್ನುತ್ತಿದ್ದರು.

ವ್ಯಕ್ತಿ ಯಾರೇ ಆಗಿರಲಿ, ಆತನ ವ್ಯವಹಾರ ಏನೇ ಇರಲಿ, ಆತ ಕಾಯಾ, ವಾಚಾ, ಮನಸ್ಸಾ ಪರಿಶುದ್ಧನಾಗಿರಬೇಕು ಮತ್ತು ಪ್ರಾಮಾಣಿಕನಾಗಿರಬೇಕು ಇದು ಗಾಂಧೀಜಿಯವರ ಬದುಕಿನ ಮೂಲ ಮಂತ್ರವಾಗಿತ್ತು. ■

# ಗಾಂಧಿ ಮತ್ತು ಕರ್ನಾಟಕ

ಭಾಗ –4

ಗಾಂಧಿ ಮತ್ತು ಕರ್ನಾಟಕದ ನಡುವೆ ಒಂದು ಮಧುರ ಸಂಬಂಧವಿದೆ. ಕರ್ನಾಟಕದ ಜೊತೆಗಿನ ಗಾಂಧೀಜಿಯವರ ಒಡನಾಟ ಮತ್ತು ಸಂಬಂಧವನ್ನು ಇತ್ತೀಚಿನ ಪೀಳಿಗೆಯ ಓದುಗರಿಗೆ ತಲುಪಿಸುವ ಉದ್ದೇಶ ನಮ್ಮದು. ಅದಕ್ಕಾಗಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಸಂಸ್ಥೆಯ ಪ್ರಕಟಣೆಯಾದ **"ಗಾಂಧಿ ಮತ್ತು ಕರ್ನಾಟಕ"** ಕೃತಿಯನ್ನು ಸರಣಿ ಮಾದರಿಯಲ್ಲಿ ಪ್ರತಿ ತಿಂಗಳು ಬಾಪು ಪ್ರಪಂಚ ಪತ್ರಿಕೆಯಲ್ಲಿ ಪ್ರಕಟಿಸುತ್ತಿದ್ದೇವೆ.



ಭಾರತದ ಸ್ವಾತಂತ್ರ್ಯ ಚಳವಳಿಗೆ ಕರ್ನಾಟಕದ ಕೊಡುಗೆ ಅಪಾರವಾದುದು,ಅದರಲ್ಲಿಯೂ ವಿದುರಾಶ್ವಥ ದುರಂತ, ಶಿವಪುರ ಧ್ವಜ ಸತ್ಯಾಗ್ರಹ ಹಾಗೂ 1982ರ ನಂತರದ (ಮೈಸೂರು ಚಲೋ ಚಳವಳಿಗಳು) ಕರ್ನಾಟಕದ ಕೊಡುಗೆಯೆಂದೆ ಭಾವಿಸುವ ಮಹತ್ವಪೂರ್ಣ ಘಟನೆಗಳಾಗಿ ಇತಿಹಾಸದಲ್ಲಿ ದಾಖಲಾಗಿವೆ . ಅದಲ್ಲದೆ ಗಾಂಧೀಜಿಯವರು ವಿಶ್ರಾಂತಿಗಾಗಿ ಕರ್ನಾಟಕದ ನಂದಿ ಗಿರಿಧಾಮವನ್ನು ಆಯ್ಕೆ ಮಾಡಿಕೊಂಡಿದ್ದು ಕರ್ನಾಟಕದ ಸುದೈವ. ಅಲ್ಲೆ ಅವರ ಆರೋಗ್ಯ ಸುಧಾರಿಸಿದ್ದು. ಗಾಂಧೀಜಿಯವರು ಕರ್ನಾಟಕಕ್ಕೆ 1915ರಿಂದ 1937ರ ಅವಧಿಯಲ್ಲಿ 19 ಸಲ ಆಗಮಿಸಿದ್ದಾರೆ. ಅವರು ಅಸಹಕಾರ ಆಂದೋಲನಕ್ಕಾಗಿ, ಖಾದಿ ಸ್ವದೇಶಿ ಆಂದೋಲನಕ್ಕಾಗಿ, ಕಾಂಗ್ರೆಸ್ ಅಧಿವೇಶನಕ್ಕಾಗಿ, ನಿಧಿ ಸಂಗ್ರಹಕ್ಕಾಗಿ, ಖಾದಿ ಪ್ರಚಾರಕ್ಕಾಗಿ, ಹರಿಜನ ನಿಧಿ ಸಂಗ್ರಹಕ್ಕಾಗಿ, ಹುದಲಿ ಸಮ್ಮೇಳನಕ್ಕಾಗಿ ಕರ್ನಾಟಕದ ನಾನಾ ಭಾಗಗಳಲ್ಲಿ ಪ್ರವಾಸ ಕೈಗೊಂಡಿದ್ದಾರೆ. ಈ ಎಲ್ಲಾ ದಾಖಲೆಗಳನ್ನು ಗಾಂಧೀಜಿಯವರೇ ಸ್ವತಃ ತಮ್ಮ ' ಹರಿಜನ ' ಮತ್ತು ' ಯಂಗ್ ಇಂಡಿಯಾ ' ಪತ್ರಿಕೆಗಳಲ್ಲಿ 1924, 1927, 1936, ಹಾಗೂ 1937ರ ಅವಧಿಯಲ್ಲಿ ಪ್ರಕಟಿಸಿದ್ದಾರೆ.

ಈ ಸಮಗ್ರ ದಾಖಲೆಗಳು ' ಗಾಂಧೀ ಮತ್ತು ಕರ್ನಾಟಕ ' ಕೃತಿಯಲ್ಲಿ ದಾಖಲಾಗಿವೆ. ಹಾಗೂ ಕರ್ನಾಟಕದ ಅಂದಿನ ಮುಂಚೂಣಿ ನಾಯಕರ ಪತ್ರ ವ್ಯವಹಾರಗಳು ಅಂದಿನ ಛಾಯಾಚಿತ್ರಗಳು ಸಹ ದಾಖಲಾಗಿವೆ. ಅಂದಿನ ಸ್ವಾತಂತ್ರ್ಯ ಹೋರಾಟಗಾರರ ನೆನಪುಗಳು ಕೂಡಾ ಈ ಕೃತಿಯಲ್ಲಿ ಸೇರ್ಪಡೆಯಾಗಿವೆ. ಅಲ್ಲದೆ ಕರ್ನಾಟಕಕ್ಕೆ ಗಾಂಧೀಜಿಯವರು ಬಂದಿದ್ದ ಹಾಗೂ ನಡೆದ ಘಟನೆಗಳ ಅವಲೋಕನವನ್ನು ಸ್ವಾತಂತ್ರ್ಯ ಹೋರಾಟಗಾರರು ತಮ್ಮ ನೆನಪಿನ ಬುತ್ತಿಯಿಂದ ತೆಗೆದಿಟ್ಟಿದ್ದಾರೆ. ಅವುಗಳೆಲ್ಲವನ್ನೂ ಸಿದ್ದವನಹಳ್ಳಿ ಕೃಷ್ಣಶರ್ಮರ ಮುಂದಾಳತ್ವದಲ್ಲಿ ಅಂದಿನ ಸಂಗ್ರಹಕಾರರು ಸಂಗ್ರಹಿಸಿದ್ದಾರೆ. ಕರ್ನಾಟಕದ 44 ಮಹನೀಯರು ತಮ್ಮ ನೆನಪುಗಳ ಬುತ್ತಿಯಿಂದ ಗಾಂಧೀಜಿಯವರ ಕರ್ನಾಟಕದ ಭೇಟಿಯಲ್ಲಿ ನಡೆದ ಘಟನೆಗಳನ್ನು ಸವಿಸ್ತಾರವಾಗಿ ದಾಖಲಿಸಲು ನೆರವಾಗಿದ್ದಾರೆ. ಅವರ ಮಾತುಗಳು ಇಂದಿಗೂ ಈ ಕೃತಿಯನ್ನು ಓದುವಾಗ ಒಂದು ಚಿತ್ರಣವನ್ನು ಓದುಗರ ಸ್ಮೃತಿಪಟಲದಲ್ಲಿ ಮೂಡಿಸುತ್ತವೆ.




**ಬೆಳಗಾವಿಯಲ್ಲಿ ಮುಂಬಯಿ ಪ್ರಾಂತೀಯ ಪರಿಷತ್ತು**

ಇದೇ ಸುಮಾರಿಗೆ 1916ರಲ್ಲಿ ಬೆಳಗಾವಿಯಲ್ಲಿ ಮುಂಬಯಿ ಪ್ರಾಂತೀಯ ಪರಿಷತ್ತನ್ನು ನೆರೆಯಿಸಲು ಬಹಳ ಭರದಿಂದ ಸಿದ್ಧತೆ ನಡೆಯಿತು. ಶ್ರೀ ದತ್ತೋಪಂತ ಬೆಳವಿಯವರು ಸ್ವಾಗತಾಧ್ಯಕ್ಷರು. ದೇಶಪಾಂಡೆ ಗಂಗಾಧರರಾಯರು ಕಾರ್ಯದರ್ಶಿ. ಪರಿಷತ್ತಿಗೆ ಅಧಿಕ ಸಂಖ್ಯೆಯಲ್ಲಿ ಜನರು ಬರಬಹುದು ಎಂಬ ನಿರೀಕ್ಷೆ ಇತ್ತು. ಕರ್ನಾಟಕದಲ್ಲೂ ಮಹಾರಾಷ್ಟದಲ್ಲೂ ಪರಷತ್ತಿನ ಪ್ರಚಾರ ಕಾರ್ಯ ರಭಸದಿಂದ ಸಾಗಿತು. ವಾಯಿಯ ಪ್ರಾಜ್ಞ ಪಾಠಶಾಲೆಯ ಮಹಾದೇವ ಶಾಸ್ತ್ರಿ ದಿವಾಕರ್ ಅವರು ಪ್ರಚಾರದ ಕಾರ್ಯವನ್ನು ವಹಿಸಿಕೊಂಡಿದ್ದರು. ಆಗ ಲೋಕಮಾನ್ಯ ತಿಲಕರೇ ರಾಜಕೀಯದಲ್ಲಿ ನಮ್ಮ ಮುಖಂಡರು. ಮಂಡಾಲೆ ಸೆರೆಮನೆಯಲ್ಲಿ ಆರು ವರ್ಷ ಕಳೆದು 1914ರಲ್ಲಿ ಬಿಡುಗಡೆ ಆದ ಮೇಲೆ ಶ್ರೀ ತಿಲಕರು ಕರ್ನಾಟಕಕ್ಕೆ ಬರುತ್ತಿದ್ದುದು ಅದೇ ಮೊದಲು. ಆದ್ದರಿಂದ ಅವರ ದರ್ಶನಕ್ಕಾಗಿ ಜನರು ಬಂದು ಮುಗಿಬಿದ್ದಾರೆಂದು ನಿರೀಕ್ಷೆ .

ಏಪ್ರಿಲ್ (1916) ತಿಂಗಳ ಕೊನೆಯ ವಾರದಲ್ಲಿ ಬೆಳಗಾವಿಯಲ್ಲಿ ಪರಿಷತ್ತು ನಡೆಯಬೇಕು. ಲೋಕಮಾನ್ಯ ತಿಲಕರೇ ಇದನ್ನು ಗೊತ್ತು ಮಾಡಿದ್ದರು. ಇದೇ ವೇಳೆಗೆ ಇನ್ನೊಂದು ಯೋಗಾಯೋಗವು ಘಟಿಸಿತು. ಪರಿಷತ್ತಿಗೆ ಗಾಂಧೀಜಿಯವರೂ ಬಂದರು. ಉತ್ತರ ಕರ್ನಾಟಕಕ್ಕೆ ಗಾಂಧೀಜಿ ಬಂದದ್ದು ಅದೇ ಮೊದಲು, ಅವರನ್ನು ಆಹ್ವಾನಿಸಲು ಬೆಳಗಾವಿಯ ಪರಿಷತ್ತಿನ ಪರವಾಗಿ ಕಾಕಾ ಕಾಲೇಕರ ಗಾಂಧೀಜಿಯ ಬಳಿಗೆ ಹೋಗಿದ್ದರು. ಕಾಕಾ ಮೊದಲು ಉಪಾಧ್ಯಾಯರ ಕೆಲಸ ಮಾಡಿದ್ದರು. ಆಮೇಲೆ ಹಿಮಾಲಯ ಯಾತ್ರ ಮಾಡಿಕೊಂಡು ಬಂದು ಗುರುದೇವ ರವೀಂದ್ರನಾಥರ ಶಾಂತಿನಿಕೇತನ ಆಶ್ರಮಕ್ಕೆ ಹೋದರು.

ಆಗ ಅಹಮದಾಬಾದಿನಲ್ಲಿ ಇದ್ದರು ಗಾಂಧೀಜಿ. ಕಾಕಾ ಅಲ್ಲಿಗೆ ಹೋದರು. ಹೇಳಿ ಕೇಳಿ ಗಾಂಧೀಜಿ ರಾಜಕಾರಣದಲ್ಲಿ ಗೋಖಲೆ ಶಿಷ್ಯರು. ಗಾಂಧೀಜಿ ಭಾರತಕ್ಕೆ ಹಿಂದಿರುಗಿ ಬಂದ ಮೇಲೆ ಗೋಖಲೆಯವರ ಭಾರತ ಸೇವಕ ಸಂಘಕ್ಕೆ ಸೇರಬೇಕೆಂದು ಇಬ್ಬರಿಗೂ ಮನಸ್ಸಿತ್ತು. ಬೆಳಗಾವಿಯ ಪರಿಷತ್ತಿನಲ್ಲಿ ಬಾಲಗಂಗಾಧರ ತಿಲಕರದೇ ಪೂರಾ ಪ್ರಭಾವ. ಗೋಖಲೆಯ ಹಾಗೂ ತಿಲಕರ ಗುಂಪುಗಳು ಬೇರೆ ಬೇರೆ. ಪರಸ್ಪರ ವಿರುದ್ಧ . ಆದ್ದರಿಂದ ಗಾಂಧೀಜಿ ಈ ಮುಂಬಯಿ ಪ್ರಾಂತಿಕ ಪರಿಷತ್ತಿಗೆ ಬರಲು ಒಪ್ಪುತ್ತಾರೋ ಇಲ್ಲವೋ ಎಂಬ ಸಂದೇಹ ಇತ್ತು ಗಂಗಾಧರ ರಾಯರಿಗೆ. ಆದರೂ ಗಾಂಧೀಜಿ ಕರ್ನಾಟಕದ ಆಹ್ವಾನವನ್ನು ಒಪ್ಪಿಕೊಂಡರು.

**ಗಾಂಧೀಜಿಯ ತಂತಿ**

ಗಾಂಧೀಜಿ ಪರಿಷತ್ತಿಗೆ ಬಾರದಂತೆ ತಡೆಯಲು ಮಂದಗಾಮಿಗಳಲ್ಲಿ ಕೆಲವರು ಬಹಳ ಪ್ರಯತ್ನ ಮಾಡುತ್ತಿದ್ದರೆಂಬ ಸುದ್ದಿ ಇದ್ದುದರಿಂದ ಪರಿಷತ್ತಿನ ಕಾರ್ಯದರ್ಶಿ ಆಗಿದ್ದ ದೇಶಪಾಂಡೆ ಗಂಗಾಧರರಾಯರಿಗೆ ತುಂಬಾ ಗಾಬರಿ ಆಯಿತು. ಗಾಂಧೀಜಿಗೆ ನೇರಾಗಿ ಪತ್ರ ಬರೆದು ಕೇಳಿಬಿಟ್ಟರು. ಬರುತ್ತಾರೋ ಇಲ್ಲವೋ ತಿಳಿಸಬೇಕೆಂದು ಕೋರಿದರು. ಗಂಗಾಧರರಾಯರೇ ಹೀಗೆ ಹೇಳಿದಾರೆ: "ನಾನು ಮತ್ತೆ ಪತ್ರ ಬರೆದೆ. ಅವರು ಬರುವದನ್ನು ಖಂಡಿತ ತಿಳಿಸಬೇಕು ಎಂದು ವಿನಂತಿ ಮಾಡಿಕೊಂಡೆ. ನನಗೆ ಅವರ ಉತ್ತರ ಬಂತು (29-4-1916) . ಒಂದು ಕಾರ್ಡು ಬರೆದರು. ಆ ಉತ್ತರ ಒಂದು ಮಾದರಿ ಉತ್ತರ. "ಸತ್ತರೆ ಒಂದು ಹೋಯಿತೇ ವಿನಾ , ಇಲ್ಲದೆ ಇದ್ದರೆ ನಾನು ಪರಿಷತ್ತಿಗೆ ಬಾರದಂತೆ ಯಾರೂ ತಡೆಯಲಾರರು– Nothing but death can prevent me from going to Belgaum and attending the

Conference.' ಈ ಕಾರ್ಡನ್ನು ಓದಿ ನನ್ನ ಆನಂದ ಒಂದಕ್ಕೆ ಎರಡಾಗಿ ಚಿಮ್ಮಿತು.

ಒಮ್ಮೆ ಗಾಂಧೀಜಿ ನಮ್ಮ ಆಹ್ವಾನವನ್ನು ಸ್ವೀಕರಿಸಿದ ಮೇಲೆ ಅವರ ಗೆಳೆಯರು ಯಾರಾದರೂ ಆಗಲಿ ಲೋಕಮಾನ್ಯ ತಿಲಕರ ವಿಷಯದಲ್ಲಿ ಅಥವಾ ರಾಷ್ಟ್ರೀಯ ಪಕ್ಷದ ವಿಷಯದಲ್ಲಿ ಏನಾದರೂ ಹೇಳಿದರೆ, ಅದನ್ನು ಕೇಳಿ ಗಾಂಧೀಜಿ ತಮ್ಮ ಮನಸನ್ನು ಬದಲಾಯಿಸಬಹುದು ಎಂದು ನನಗಿದ್ದ ಸಂಶಯದಿಂದ ನನ್ನ ಅಜ್ಞಾನ ಪ್ರದರ್ಶಿತವಾಯಿತಲ್ಲ ಎಂದು ತುಂಬಾ ವಿಷಾದ ಆಯಿತು. ಈ ಮನುಷ್ಯ ಬಹು ವಿಲಕ್ಷಣ ವ್ಯಕ್ತಿ: ಅವರ ಸಂಗಡ ಕೂಡಿ ನಡೆಯುವುದು ಬಹಳೆ ಕಷ್ಟ ಎನಿಸಿತು ನನಗೆ ಅದೇ ಸಮಯದಲ್ಲಿ. ಆದರೆ ಅವರ ಬಗ್ಗೆ ನನ್ನ ಮನಸಿನಲ್ಲಿ ಪೂಜ್ಯ ಬುದ್ಧಿ ನೆಟ್ಟು ಹೋಯಿತು."

ಜನಸಾಮಾನ್ಯರಿಗೆ ಗಾಂಧೀಜಿ ವಿಷಯ ಹೆಚ್ಚಾಗಿ ಗೊತ್ತಿರಲಿಲ್ಲ. ದಕ್ಷಿಣ ಆಫ್ರಿಕಾದ ಅವರ ಮಹಾಸಾಹಸ, ಅವರ ಕೀರ್ತಿ ಭಾರತದಲ್ಲಿ ವಿದ್ಯಾವಂತರಿಗೆ ಮಾತ್ರವೇ ಗೊತ್ತಿತ್ತು. ಅವರು ಪ್ರಯಾಣ ಮಾಡುತ್ತಿದ್ದುದು ರೈಲಿನಲ್ಲಿ , ಮೂರನೆಯ ತರಗತಿಯ ಗಾಡಿಯಲ್ಲಿಯೆ. ಪರಿಷತ್ತಿಗೆ ಅವರೂ, ಅವರ ಮಗ ರಾಮದಾಸನೂ, ಕಾಕಾ ಕಾಲೇಲಕರರೂ ಸೇರಿ ಒಟ್ಟಿಗೇ ಏಪ್ರಿಲ್ 29, 1916 ರಂದು ಬೆಳಗಾವಿಗೆ ಬಂದರು, ಅಂದೇ ಮುಂಬಯಿ ಪ್ರಾಂತೀಯ ಸಮ್ಮೇಳನ.

ಆಗ ಗಾಂಧೀಜಿಗಿಂತ ಬಾಲ ಗಂಗಾಧರ ತಿಲಕರದೇ ಹೆಚ್ಚು ಪ್ರಭಾವ ಜನತೆಯಲ್ಲಿ. ಸ್ವಾಗತದ ಮಹಾ ವೈಭವವೂ ಅವರಿಗೇ ಹೆಚ್ಚು, ಆದರೆ ಗಾಂಧೀಜಿಯ ಬಗ್ಗೆ ಅಭಿಮಾನ ಇದ್ದವರೂ ದೇಶದಲ್ಲಿ ಇದ್ದರು. ಪರಿಷತ್ತಿನ ಪ್ರೇಕ್ಷಕ ವೃಂದದಲ್ಲಿಯೂ ಇದ್ದರು. ಪರಿಷತ್ತಿನಲ್ಲಿ ಗಾಂಧೀಜಿ ಮಾತಾಡಬೇಕು ಎಂದು ಒತ್ತಾಯ ಬಂತು. ಅದರಂತೆ ಅವರು 1-5-1916 ರಂದು ಮಾತೂ ಆಡಿದರು.

ಆಗ ನಮ್ಮ ರಾಜಕೀಯದಲ್ಲಿ ಮಿತವಾದಿಗಳು (ಕಾನೂನಿಗನುಸಾರವಾಗಿಯೇ. ಆಂದೋಲನವನ್ನು ನಡೆಸಬೇಕೆನ್ನುವರು) ಉಗ್ರವಾದಿಗಳು, (ಸ್ವದೇಶಿ, ಪರದೇಶ ವಸ್ತುಗಳ ಬಹಿಷ್ಕಾರ, ರಾಷ್ಟ್ರೀಯ ಶಿಕ್ಷಣ, ಸ್ವರಾಜ್ಯ ಇವುಗಳ ಬಗ್ಗೆ ತೀವ್ರವಾಗಿಯೂ ನೇರವಾಗಿಯೂ ಜನರನ್ನು ಹುರಿದುಂಬಿಸುವವರು) – ಈ ಎರಡು ಪಕ್ಷಗಳು ಪರಸ್ಪರ ವೈಮನಸ್ಯ ತಾಳಿದ್ದವು . 1907 ರಲ್ಲಿ ಸೂರತ್ ಕಾಂಗ್ರೆಸ್ ಗಲಭೆಯಲ್ಲಿ ಕೊನೆಗೊಂಡಾಗ ಉಗ್ರವಾದಿಗಳು ಕಾಂಗ್ರೆಸ್ ನಿಂದ ದೂರವಿದ್ದರು. ಈ ಎರಡು ಪಕ್ಷಗಳನ್ನು ಒಟ್ಟು ಕೂಡಿಸಲು ತಿಲಕರು ಮಂಡಿಸಿದ ಠರಾವನ್ನು ಹೃದಯಪೂರ್ವಕವಾಗಿ ಸಮರ್ಥಿಸುತ್ತ ಗಾಂಧೀಜಿ ಅವರು ಹಿಂದುಸ್ತಾನಿಯಲ್ಲಿ ಹೇಳಿದರು: " ತಾವು ಯಾರ ಪಕ್ಷಕ್ಕೂ ಸೇರಿದವರಲ್ಲ. ಆದ್ದರಿಂದ ತಾವು ಹೊರಗಿನವರು, ತಮಗೆ ಭಾಷಣಗಳನ್ನು ಕೇಳುವ ಮನಸ್ಸೂ ಇಲ್ಲ. ತಮ್ಮ ಧ್ವನಿಯನ್ನೇ ಕೇಳುವ ಮನಸ್ಸೂ ಇಲ್ಲ. ಆದರೆ ತಾವು ರಾಷ್ಟ್ರೀಯ ಸೇವೆಗೆ ಒಬ್ಬ ಉಮೇದುವಾರರು. ಆದ್ದರಿಂದ ಎಲ್ಲ ಸಂಸ್ಥೆಗಳನ್ನೂ ಪರಿಶೀಲಿಸುವುದು ತಮ್ಮ ಕೆಲಸ. ಅಂತೇ ಬೆಳಗಾವಿಗೆ ತಾವು ಬಂದುದ್ದು. ರಾಷ್ಟ್ರೀಯತೆಯ ಎರಡು ಮಹಾ ಪಕ್ಷಗಳು ಬೆಳಗಾವಿಯಲ್ಲಿ ಸೇರುತ್ತವೆ ಎಂದು ತಮಗೆ ತಿಳಿದುಬಂತು.

ಇಂಥದೊಂದು ಶಾಂತಿ–ಸಮಾಧಾನಗಳ ಕಾಲ ಇಲ್ಲಿ ಪ್ರಾರಂಭವಾಗುತ್ತದೆ ಎಂದು ತಿಳಿದು ತಮಗೆ ಅಲ್ಲಿ ಬರಬೇಕೆನಿಸಿತು. ಈ ಪರಿಷತ್ತಿನಲ್ಲಿ ಅಂಥ ಒಂದು ಏಕತೆಯ ಅಸ್ತಿಭಾರ ಹಾಕಲ್ಪಡುವುದು ಎಂಬುದು ತುಂಬಾ ಸಂತೋಷದ ವಿಷಯ ಎಂದು ಹೇಳಿ ತಿಲಕರ ಗೊತ್ತುವಳಿಯ ವಿಷಯದಲ್ಲಿ ತಮ್ಮ ಅಭಿಪ್ರಾಯವನ್ನು ಹೀಗೆ ವ್ಯಕ್ತಪಡಿಸಿದರು:

ಆ ತೀರ್ಮಾನದ ಪ್ರತಿಯೊಂದು



ಅಕ್ಷರವನ್ನೂ ಒಪ್ಪಿಕೊಳ್ಳಬೇಕು ಎಂದು ಯಾರೂ ಹೇಳರು. ತೀರ್ಮಾನದ ಮುಖ್ಯೋದ್ದೇಶ ತಾವು ಒಪ್ಪಿಕೊಂಡರಾಯಿತು . ತಾವೇ ತೀರ್ಮಾನವನ್ನು ಬರೆದಿದ್ದರೆ ಅದರಲ್ಲಿ ಕೆಲವು ಮಾತನ್ನು ಬಿಡುತ್ತಿದ್ದರು. ತಿಲಕರು ಆಡಿದಂತೆ ಮಾಡುವವರು. ಅವರ ಭಾಷಣದಲ್ಲಿ ಏನೂ ಕೊರತೆ ಇರಲಿಲ್ಲ. ಅವರ ಭಾಷಣದಂತೆ ಕೆಲಸ ನಡೆದರೆ ಎರಡು ಪಕ್ಷಗಳೂ ಒಂದಾಗಿ ಕಲೆತು ದೇಶೋದ್ಧಾರ ಆದೀತು. ಆದ್ದರಿಂದಲೇ ತಾನು ಬ್ಯಾಪ್ಟಿಸ್ಟಾ ಅವರ ಮಾತಿಗೆ ವಿರೋಧವಾಗಿದ್ದದ್ದು. ಬ್ಯಾಪ್ಟಿಸ್ಟಾ ವಕೀಲರಾಗಿ ಮಾತಾಡಿದರು. ವಕೀಲರ ಮನೋಧರ್ಮದಿಂದ ಇದನ್ನು ನೋಡಿದರೆ ಇವರಲ್ಲಿ ಬರೀ ದೋಷಗಳೇ ಕಾಣುತ್ತವೆ. ಇದು ರಾಷ್ಟ್ರೀಯ ಸಮಸ್ಯೆ. ಸಾಮಾನ್ಯ ಜನರ ದೃಷ್ಟಿಯಿಂದ ಇದನ್ನು ನೋಡಬೇಕು.

ಆಗ ವಿರೋಧಿ ಪಕ್ಷದ ಲೋಪದೋಷಗಳು ಕಳೆದುಹೋಗುತ್ತವೆ; ಸಮ್ಮತಿ ಸಂಪರ್ಕಗಳ ಅಂಶಗಳು ಕಾಣಬರುತ್ತವೆ. ಈ ಪಕ್ಷ





ಶಾಂತವಾಗಿಯೇ ಮಾತನಾಡಿದರು. ಜನರೂ ಶಾಂತವಾಗಿಯೇ ಕೇಳಿದರು. ಎಷ್ಟು ಜನಕ್ಕೆ ಅರ್ಥವಾಯಿತೊ ಅದನ್ನು ಹೇಳುವುದು ಕಷ್ಟ

**ಮತಭೇದ ಸಂಶಯ**

ಬಾಲಗಂಗಾಧರ ತಿಲಕರಿಗೂ ಗಾಂಧೀಜಿಗೂ ಏನೋ ಮತಭೇದ ಇದೆ, ವಿರಸ ಇದೆ ಎಂದು ಜನ ತಿಳಿದುಕೊಂಡಿದ್ದರು. ಜನರಲ್ಲಿ ಹರಡಿದ್ದ ಈ ಅಭಿಪ್ರಾಯವನ್ನು ಹೋಗಲಾಡಿಸಬೇಕೆಂದು ದೇಶಪಾಂಡೆ ಗಂಗಾಧರರಾಯರ ಪ್ರಬಲವಾದ ಇಚ್ಛೆ. ಇಬ್ಬರೂ ಏಕಾಂತದಲ್ಲಿ ಭೆಟ್ಟಿಯಾಗಿ ಮಾತಾಡಲಿ ಎಂದು ಏರ್ಪಾಡು ಮಾಡಿದರು. ಈ ಮಾತನ್ನು ಗಂಗಾಧರರಾಯರು ಇಬ್ಬರಿಗೂ ತಿಳಿಸಿದರು. ಇಬ್ಬರೂ ಒಪ್ಪಿಕೊಂಡರು. ತಿಲಕರ ಬಳಿಗೇ ಬರುತ್ತೇನೆ ಮಾತಾಡಲು ಎಂದು ಹೇಳಿದರು ಗಾಂಧೀಜಿ. ಆದರೆ ತಿಲಕರ ಸುತ್ತ ಜನ ಜಂಗುಳಿ ಸದಾ ಇದ್ದೇ ಇರುತ್ತಿತ್ತು. ಆ ಗುಂಪು ಅವರ ಜೊತೆಯಲ್ಲಿ ಇದ್ದಾಗ ಇಬ್ಬರೂ ಮನಬಿಚ್ಚಿ ಮಾತನಾಡುವುದು ಸಾಧ್ಯ ಇಲ್ಲ ಎನಿಸಿತು ದೇಶಪಾಂಡೆಯವರಿಗೆ. ತಿಲಕರಿಗೂ ಹಾಗೆಯೇ ಅನಿಸಿರಲಿಕ್ಕೆ ಬೇಕು. ತಿಲಕರು ಗಾಂಧೀಜಿಯ ಬಳಿಗೆ ತಾವೇ ಬರುವುದಾಗಿ ತೀರ್ಮಾನಿಸಿದರು. ಒಂದು ಸಮಯ ಗೊತ್ತು ಆಯಿತು. ಗಾಂಧೀಜಿ ಇದ್ದಲ್ಲಿಗೆ ತಿಲಕರು ಬಂದರು. ಒಂದು ಗಂಟೆಯ ಕಾಲ ಮಾತುಕತೆ ನಡೆಯಿತು.

ಮುಂದೆ ತಿಲಕರು ಅಹಮದಾಬಾದಿಗೆ ಹೋಗಿದ್ದಾಗ ಅವರ ಸ್ವಾಗತಕ್ಕಾಗಿ ಗಾಂಧೀಜಿಯೇ ಸಹಿ ಮಾಡಿ ಪ್ರಕಟಣೆ ಹೊರಡಿಸಿದ್ದರು. ಆ ಊರಿನಲ್ಲಿ ತಿಲಕರ ಮೆರವಣಿಗೆ ಆಯಿತು. ತಿಲಕರ ಜೊತೆಯಲ್ಲಿಯೇ ಗಾಂಧೀಜಿ ಕೂತಿದ್ದರು. ಅದನ್ನು ನೋಡಿದವರಿಗೆ ಎಲ್ಲರಿಗೂ ಸಮಾಧಾನ ಆಗಿರಬೇಕು.

ಮುಂದೆ ಗಾಂಧೀಜಿ ಚಂಪಾರಣ್ಯದಲ್ಲಿ (1917) ನೀಲಿ ಉತ್ಪಾದನೆಯ ಕಳಂಕದ ಬಗ್ಗೆ ವಿಚಾರಣೆ ಮಾಡಲು ಸ್ವತಃ ಹೋದರು. ಚಂಪಾರಣ್ಯದ ಆ ಕಥೆಯನ್ನೆಲ್ಲ ದಿ.ರಾಜೇಂದ್ರಪ್ರಸಾದರು "The Story of Champaranya' ಎಂದು ಬರೆದಿದ್ದಾರೆ.

ಗಾಂಧೀಜಿಯ ಆತ್ಮಕಥೆ–ಸತ್ಯಶೋಧನೆ–ಅಲ್ಲಿಯೂ ಸಂಗ್ರಹವಾಗಿ ಈ ಕಥೆ ಬರುತ್ತದೆ

ಪ್ರಾಮಾಣಿಕತನದಿಂದ, ನಿಸ್ವಾರ್ಥ ಬುದ್ಧಿಯಿಂದ ಸದಾ ದೇಶವನ್ನೂ, ದೇಶದ ಜನರನ್ನೂ ಕುರಿತು ಚಿಂತಿಸುತ್ತ ತಮ್ಮ ಪಕ್ಷದ ಅಥವಾ ಸ್ವಂತದ ಲಾಭಕ್ಕೆ ಗಮನ ಕೊಡದೆ ಕಾಂಗ್ರೆಸ್ಸಿಗೆ ಹಿಂದಿರುಗಿ ಬಂದರೆ ದೇವರು ಅವರ ಕಡೆ ವಾಲುತ್ತಾನೆ. ಆಗ ದೈವ ಬಲದಿಂದ ಭಾರತ ದೇಶ ಇಡೀ ಜಗತ್ತೇ ವಿರೋಧಿಸಿದರೂ ಮುಂದೆ ಸಾಗುತ್ತದೆ. ಮಂದವಾದಿ ಮತ್ತು ಉಗ್ರವಾದಿಗಳಿಗೂ ಇಬ್ಬರಿಗೂ ಒಪ್ಪಂದ ಆಗುವಂತೆ ಇದ್ದರೆ, ಅವರಿಗೆ ಇಷ್ಟವಿದ್ದರೆ ಆಗಲಿ. ಆದರೆ ಮನಸ್ಸು ಇಲ್ಲದೆ ಮೇಲೆ ಮೇಲೆ ಒಪ್ಪಂದ ಮಾಡಿಕೊಂಡು ಅದನ್ನು ಮುರಿಯುವ ಕೆಲಸ ಮಾಡುವಂತೆ ಇದ್ದರೆ, ದಯವಿಟ್ಟು ಮಾಡಿಕೊಳ್ಳಬೇಡಿ. ಇಷ್ಟ ಇಲ್ಲದ ಒಪ್ಪಂದ ಖಂಡಿತ ಬೇಡ. ಪ್ರತಿಯೊಂದು ಪಕ್ಷವೂ ತನ್ನ ತನ್ನ ರೀತಿಯಲ್ಲಿ ಪ್ರತ್ಯೇಕ ಆಗಿ ಕೆಲಸಮಾಡಲಿ. ಇದರಿಂದ ದೇಶಕ್ಕೆ ಹಿತ ಆಗುತ್ತದೆ ಎಂದರು.

ಇದಕ್ಕೆ ಮೊದಲೇ ಏಪ್ರಿಲ್ 30ನೇ ತಾರೀಖು (1916) ನಟ ರವಿವಾರ ಪೇಟೆಯಲ್ಲಿ ದಲಿತ ವರ್ಗದ ವಿಷಯವಾಗಿ ಮಾತನಾಡಿದರು. ಸುಮಾರು ಸಾವಿರ ಜನ ಸೇರಿತ್ತು ಶ್ರೋತೃಗಳಲ್ಲಿ ಲಿಂಗಾಯಿತರು ಮತ್ತು ಅಸ್ಪೃಶ್ಯರೇ ಹೆಚ್ಚಾಗಿದ್ದರು. ಕಣಬರಗಿಯ ಶಿವಮೂರ್ತಿಸ್ವಾಮಿ ಅಧ್ಯಕ್ಷರಾಗಿದ್ದರು. ಗಾಂಧೀಜಿಗೆ ಅಸ್ವಸ್ಥತೆ ಇದ್ದುದರಿಂದ ಒಂದೇ ನಿಮಿಷ ಮಾತನಾಡುವುದಾಗಿ ಹೇಳಿದರು:

ಪ್ರಾಂತೀಯ ಪರಿಷತ್ತನ್ನು ಬೆಳಗಾವಿಯಲ್ಲಿ ನೆರೆವೇರಿಸುವುದರ ವಿರುದ್ಧ ಇದ್ದ ಚಟುವಟಿಕೆಯನ್ನು ಖಂಡಿಸಿದರು. ಈ ಪರಿಷತ್ತು ನೆರೆಯುವುದು ಎರಡೂ ರಾಜಕೀಯ ಪಕ್ಷಗಳ ನಡುವೆ ಒಂದು ಸಮಾಧಾನ ಮಾಡಲಿಕ್ಕೆ. ಐಕಮತ್ಯ ಇಲ್ಲದೆ ಸ್ವರಾಜ್ಯ ಸಿಗುವುದಿಲ್ಲ. ಭಾರತಕ್ಕೆ ಸ್ವರಾಜ್ಯ ಸಿಗಬೇಕು. ಅದನ್ನು ಎಲ್ಲ ವರ್ಗಗಳೂ ಸೇರಿ ಕೇಳಬೇಕು. ಸ್ವರಾಜ್ಯ ಬಂದರೆ ಯಾವ ಒಂದು ವರ್ಗದ್ದೂ ಮೇಲುಗೈ ಇರುವುದಿಲ್ಲ. ಹಾಗಿಲ್ಲದೆ ಹೋದರೆ, ಅದು ಸ್ವರಾಜ್ಯವೆ ಅಲ್ಲ. ತಮ್ಮ ಪಾಲಿಗೆ ಮೇಲೂ ಇಲ್ಲ, ಕೆಳಗೂ ಇಲ್ಲ. ಒಬ್ಬ ಮನುಷ್ಯ ಭಂಗಿ ಅಥವಾ ನಾಪಿತ ಎಂದು ಅವನನ್ನು ನೀಚವಾಗಿ ನೋಡುವುದಿಲ್ಲ. ಒಬ್ಬ ಮನುಷ್ಯ ಬ್ರಾಹ್ಮಣನಾಗಿ ಹುಟ್ಟಿದ ಮಾತ್ರಕ್ಕೆ ತಮಗೆ ಅವನಲ್ಲಿ ವಿಶೇಷ ಆದರ ಇಲ್ಲ. ಎಲ್ಲವನ್ನೂ ಒಂದೇ ರೀತಿ ಕಾಣುವಂತೆ, ವರ್ಗಭೇದ ಮತಭೇದಗಳನ್ನು ತೋರದಂತೆ ಧರ್ಮ ನಮಗೆ ಹೇಳಿಕೊಟ್ಟಿದೆ.

ನಮ್ಮಲ್ಲಿ ಭೇದ ಬುದ್ಧಿ ಇರುವವರೆಗೂ ಸ್ವರಾಜ್ಯ ಸಿಗುವುದಿಲ್ಲ. ಅವರ ಆ ಹೊತ್ತಿನ ಭಾಷಣದಲ್ಲಿ ಯಾವ ರೀತಿಯ ಉದ್ವೇಗವೂ, ಆವೇಶವೂ ಇರಲಿಲ್ಲ.

■

# ಅರಸೀಕೆರೆಯಲ್ಲಿ
# 'ನಂದಿನಿ' ರಾಷ್ಟ್ರೀಯ ಯುವಶಿಬಿರ

**ಬಾ**ಪೂಜಿ" ಶಾಂತಿ ಮತ್ತು ಅಹಿಂಸೆಯ ಸಾಕಾರ ಮೂರ್ತಿ. "ಆಚಾರ್ಯ" ವಿನೋಬಾ ಭಾವೆ ಅದ್ಭುತ ಇಚ್ಛಾಶಕ್ತಿಯ ಅದಮ್ಯ ಚೇತನ. ಈ ಈರ್ವರೂ ಸತ್ಪುರುಷರು ಭಾರತೀಯ ಸಮಾಜಕ್ಕಾಗಿ ಮಾಡಿದ ಸೇವೆ ಮತ್ತು ನೀಡಿದ ಕೊಡುಗೆಗಳು ಚಿರಸ್ಮರಣೀಯ, ಅನುಕರಣೀಯ. ಮಹಾತ್ಮಾ ಗಾಂಧೀಜಿಯವರ 155ನೆಯ ಹಾಗೂ ಆಚಾರ್ಯ ವಿನೋಬಾ ಭಾವೆಯವರು 128ನೆಯ ಜಯಂತ್ಯೋತ್ಸವ ಅಂಗವಾಗಿ ಅವರನ್ನು ಸ್ಮರಿಸುವ ಹಾಗೂ ಅವರ ಚಿಂತನೆ ಹಾಗೂ ಪ್ರತಿಪಾದನೆಗಳನ್ನು ಇಂದಿನ ಯುವಸಮುದಾಯ ಅದರಲ್ಲೂ ವಿಶೇಷವಾಗಿ ಮಹಿಳೆಯರಿಗೆ ಮನದಟ್ಟು









ಮಾಡಿಕೊಡುವ ಉದ್ದೇಶದಿಂದ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯು ದಿನಾಂಕ 20 ರಿಂದ 24 ನೇ ಆಗಸ್ಟ್, 2023 ರವರೆಗೆ "ನಂದಿನಿ ರಾಷ್ಟ್ರೀಯ ಯುವ ಶಿಬಿರ" ವನ್ನು ಹಮ್ಮಿಕೊಂಡಿತ್ತು. ರಾಜ್ಯ ರಾಷ್ಟ್ರೀಯ ಸೇವಾ ಯೋಜನೆ ಕೋಶ, ಕರ್ನಾಟಕ ಸರಕಾರ, ಕಸ್ತೂರ್ಬಾ ಗಾಂಧಿ ನ್ಯಾಷನಲ್ ಮೆಮೋರಿಯಲ್ ಟ್ರಸ್ಟ್, ಅರಸೀಕೆರೆ, ವಿನೋಬಾ ವಿಚಾರ್ ಪ್ರವಾಹ್, ಶಹಜಾನಪುರ ಹಾಗೂ ಸರಕಾರಿ ಪ್ರಥಮ ದರ್ಜೆ ಕಾಲೇಜು, ಟಿ – ದಾಸರಹಳ್ಳಿ, ಬೆಂಗಳೂರು ಇವರುಗಳ ಸಂಯುಕ್ತಾಶ್ರಯದಲ್ಲಿ ಅರಸೀಕೆರೆಯ ಕಸ್ತೂರಬಾ ಆಶ್ರಮದ ಶಾಂತ, ಸ್ವಚ್ಛ ಹಾಗೂ ಸುಂದರ ಪರಿಸರದ ಆವರಣದಲ್ಲಿ ಆಯೋಜಿತಗೊಂಡಿದ್ದ ಸದರಿ ಶಿಬಿರವು ಭಾರತದ ಸ್ವಾತಂತ್ರ ಚಳುವಳಿ, ಸಾಮಾಜಿಕ ಹಾಗೂ ಆರ್ಥಿಕ ವಿಕಾಸ, ರಾಜಕೀಯ ಪಾರುಪತ್ಯ, ಕುಟುಂಬದ ಭೌತಿಕ ಮತ್ತು ಭೌದ್ಧಿಕ ಪ್ರಗತಿ, ಆಧ್ಯಾತ್ಮಿಕ ಸಾಧನೆ ಹಾಗೂ ಪ್ರತಿಪಾದನೆ ಸೇರಿದಂತೆ ರಾಷ್ಟ್ರೀಯ ಹಾಗೂ ಸಾಮಾಜಿಕ ಜೀವನ ಧಾರೆಯಲ್ಲಿ ಮಹಿಳೆಯು ನಿರ್ವಹಿಸಿದ ಪಾತ್ರ, ನೀಡಿದ ಕೊಡುಗೆ ಹಾಗೂ ಮೂಡಿಸಿದ ಛಾಪನ್ನು ಇಂದಿನ ಯುವ ಮಹಿಳೆಯರಿಗೆ ಅರ್ಥಿಸಿಕೊಟ್ಟು ಮನದಟ್ಟು ಮಾಡುವ ಉದ್ದೇಶದಿಂದ ಏರ್ಪಡಿಸಲಾಗಿದ್ದ ಸದರಿ ಶಿಬಿರಕ್ಕೆ "ನಂದಿನಿ ರಾಷ್ಟ್ರೀಯ ಯುವ ಶಿಬಿರ" ಎಂತಲೇ ಶೀರ್ಷಿಕೆ ನೀಡಲಾಗಿತ್ತು. ನಂದಿನಿ – ಸಶಕ್ತ, ಸರ್ವಶಕ್ತ ಸ್ತ್ರೀಯ ಸಂಕೇತ.

ಕರ್ನಾಟಕವೂ ಸೇರಿದಂತೆ ಭಾರತದ ನಾನಾ ರಾಜ್ಯಗಳ ವಿಷಯ ತಜ್ಞರು, ಉಪನ್ಯಾಸಕರು, ಸಮಾಜ ಸೇವಾ / ಸ್ವಯಂ ಸೇವಾ ಸಂಸ್ಥೆಗಳ ಮುಖ್ಯಸ್ಥರು,

ಯುವ ಮಹಿಳೆಯರು ಹಾಗೂ ವಿದ್ಯಾರ್ಥಿನಿ ಸ್ವಯಂ ಸೇವಕಿಯರು ಆಗಮಿಸಿ ಭಾಗವಹಿಸಿದ್ದ ಶಿಬಿರದ ಐದೂ ದಿನಗಳ ಅವಧಿಯಲ್ಲಿ ದೇಶಭಕ್ತಿ, ಸಮಾಜ ಸೇವೆ, ಸುಸಂಸ್ಕೃತ, ಸಹಕಾರಯುತ ಹಾಗೂ ಸಭ್ಯ ಸಾಮಾಜಿಕ ಜೀವನ, ಮಾನವೀಯ ಮೌಲ್ಯಗಳು ಹಾಗೂ ಅನುಕರಣೀಯ ವರ್ತನೆ, ಕಾರ್ಮಿಕ ವರ್ಗದ ಬಲ ಸಂವರ್ಧನೆ, ಅನ್ನದಾತ ರೈತ ಕುಟುಂಬದ ಶ್ರೇಯೋಭಿವೃದ್ಧಿ, ಯುವ ಸಮುದಾಯದ ಸಕಾರಾತ್ಮಕ ಶಕ್ತಿ ವರ್ಧನೆ, ಸತ್ಯ – ಶಾಂತಿ – ಅಹಿಂಸೆ ತತ್ವಗಳ ಪರಿಪಾಲನೆ, ಜಾಗತಿಕ ಸುಸ್ಥಿರ ಅಭಿವೃದ್ಧಿ ಹಾಗೂ ಸಹಕಾರಯುತ ಭ್ರಾತೃತ್ವ ಜೀವನ, ' ವಸುದೈವ ಕುಟುಂಬಕಂ ' ತತ್ವದ ಅನುಷ್ಠಾನ ಹಾಗೂ ಆಚರಣೆ ಮುಂತಾದ ಪ್ರಮುಖ ಸಮಕಾಲೀನ ವಿಷಯಗಳ ಕುರಿತಾಗಿ ಉಪನ್ಯಾಸ ಗೋಷ್ಠಿಗಳನ್ನು ಏರ್ಪಡಿಸುವ ಮೂಲಕ ಮತ್ತು ಶಿಬಿರಾರ್ಥಿಗಳು ನಿಯುಕ್ತ ಚಟುವಟಿಕೆಗಳನ್ನು ನಿರ್ವಹಿಸುವ ಮೂಲಕ ಸೈದ್ಧಾಂತಿಕ ಹಾಗೂ ಪ್ರಾಯೋಗಿಕ ಜ್ಞಾನವನ್ನು ಅರ್ಜಿಸುವಂತೆ ಶಿಬಿರದ ಧ್ಯೇಯೋದ್ದೇಶಗಳನ್ನು ಅನುಷ್ಠಾನಕ್ಕೆ ತರಲಾಯಿತು.

ಶ್ರೀ ರಾಮಚಂದ್ರ ರಾಹಿ, ಶ್ರೀ ರಮೇಶ ಭಯ್ಯಾ, ಶ್ರೀ ಸಂಜಯ ರಾಯ್, ಶ್ರೀಮತಿ ಚಂಪಾ ಬೇಹ್ನ್, ಶ್ರೀಮತಿ ಉಷಾ ಶರ್ಮಾ, ಡಾ. ಉಷಾ ಆಬ್ರೋಳ್, ಶ್ರೀಮತಿ ಸುನಂದಾ ಜೈರಾಮ್, ಶ್ರೀ ಅಳಗನ್ ಅಣ್ಣಾಮಲೈ, ನಾಡೋಜ ಡಾ. ವೂಡೆ ಪಿ ಕೃಷ್ಣ, ಡಾ. ಭಾರತಿ













ದೇವಿ, ಡಾ. ಪ್ರತಾಪ್ ಲಿಂಗಯ್ಯ, ಶ್ರೀಮತಿ ಸರೋಜಮ್ಮ ತುಲಸಿದಾಸ್, ಶ್ರೀ ಎನ್ ಆರ್ ವಿಶುಕುಮಾರ್, ಶ್ರೀಮತಿ ಪ್ಯಾರಿ ಜಾನ್ ಮುಂತಾದ ವಿದ್ವಾಂಸರು ಹಾಗೂ ವಿಷಯ ತಜ್ಞರು ವಿವಿಧ ವಿಷಯಗಳ ಕುರಿತು ವಿಶೇಷ ಉಪನ್ಯಾಸಗಳನ್ನು ನೀಡುವ ಮೂಲಕ ಮಹಾತ್ಮಾ ಗಾಂಧೀಜಿ ಹಾಗೂ ಆಚಾರ್ಯ ವಿನೋಬಾ ಭಾವೆಯವರು ತಮ್ಮ ಚಿಂತನೆಗಳಲ್ಲಿ, ಕೃತಿಗಳಲ್ಲಿ ಮಹಿಳೆ ವಹಿಸಿದ ಪಾತ್ರವನ್ನು ಯಥಾವತ್ತಾಗಿ ವಿವರಿಸಿ ಶಿಬಿರಾರ್ಥಿಗಳಿಗೆ ಸ್ತ್ರೀಶಕ್ತಿಯ ಸಾಮರ್ಥ್ಯ ಹಾಗೂ ಪೂಜ್ಯನೀಯ ಸ್ಥಾನವನ್ನು ಅರಿಯಲು ಅವಕಾಶ ಮಾಡಿಕೊಟ್ಟಿತು.

ಶಿಬಿರದ ಸಂಘಟಕಿ ಡಾ . ಅಬೀದಾ ಬೇಗಂ ಶಿಬಿರದ ಐದೂ ದಿನಗಳ ಕಾಲ ಎಲ್ಲ ಕಾರ್ಯಕ್ರಮಗಳನ್ನು ಅತ್ಯಂತ ಅಚ್ಚುಕಟ್ಟಾಗಿ, ಶಿಸ್ತು – ಸಮಯ ಪಾಲನೆಯಡಿಯಲ್ಲಿ ಯಶಸ್ವಿಯಾಗಿ ನೆರವೇರುವಂತೆ ಸಾಧಿಸಿ ತೋರಿಸಿದ್ದು "ನಂದಿನಿ" ಪದದ ಅರ್ಥವನ್ನು ಅಕ್ಷರಶಃ ಅರ್ಥೈಸಿ ತಿಳಿಸುವಂತೆ ಇತ್ತು.

ಅಂತಿಮವಾಗಿ ಎರಡು ನುಡಿಗಳು ಉಲ್ಲೇಖನೀಯ. ಒಂದು, ಶಿಬಿರದ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಅರಸೀಕೆರೆ ವಿಧಾನ ಸಭಾ ಕ್ಷೇತ್ರದ ಶಾಸಕರಾದ ಸನ್ಮಾನ್ಯ ಶ್ರೀ ಶಿವಲಿಂಗೇಗೌಡರು ವ್ಯಕ್ತಪಡಿಸಿರುವಂತೆ ಇಂಥ ಪರಿಣಾಮಕಾರಿ ಹಾಗೂ ಅರ್ಥಪೂರ್ಣ ಯುವಜನ ಕೇಂದ್ರೀಯ ಕಾರ್ಯಕ್ರಮಗಳು ಹೆಚ್ಚಿನ ಸಂಖ್ಯೆಯಲ್ಲಿ ಆಯೋಜನೆಗೊಂಡು ಯುವಸಮುದಾಯದಿಂದ ಭಾರತದ ಪ್ರಜಾತಾಂತ್ರಿಕ ಮೌಲ್ಯಗಳು ಜಾರಿಯಲ್ಲಿ ಬರುವಂತಾಗಬೇಕು. ಎರಡನೆಯದು, ಸಮಾರೋಪ ಸಮಾರಂಭದ ಸಂದೇಶವನ್ನು ನೀಡಿ ಮಾತನಾಡಿದ ರಾಜ್ಯ ರಾಷ್ಟ್ರೀಯ ಸೇವಾ ಯೋಜನೆ ಅಧಿಕಾರಿ ಶ್ರೀ ಪ್ರತಾಪ್ ಲಿಂಗಯ್ಯ ರವರು ಹೇಳಿದಂತೆ ಭಾರತದ ವೈವಿಧ್ಯತೆಯಲ್ಲಿ ಏಕತೆ ಎಂಬ ಸುಮಧುರ ಭಾಂದವ್ಯವನ್ನು ಗಟ್ಟಿಯಾಗಿ ಬೆಸೆಯುವ ಕಾರ್ಯ ಮಾತು ಅವಕಾಶ "ನಂದಿನಿ" ಯಂಥ ಶಿಬಿರಗಳಿಂದ ಮಾತ್ರ ಸಾಧ್ಯ.

ಎಲ್ಲ ಸಹೃದಯಗಳ ಸಹಕಾರದಿಂದ ಮನುಜಮತ ಆಧಾರಿತ ಸುಸಂಸ್ಕೃತ, ಸಭ್ಯ, ಶಾಂತಿ – ಸೌಹಾರ್ದಯುತ ಸದೃಢ ಭಾರತದ ನಿರ್ಮಾಣವಾಗಲಿ ಎಂದು ಆಶಿಸುವಾ..

ಜೈ ಜಗತ್

**– ಸಂತೋಷ್ ಕುಮಾರ್**

ಉಪನ್ಯಾಸಕರು, ರಾಯಚೂರು

# ಮಹಾತ್ಮ ಗಾಂಧಿಯವರ ಮಹತ್ವಗಳು



- ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರ ಮುಂದೆ ಖ್ಯಾತ ಶಹನಾಯ್ ವಾದಕ ಭಾರತ ರತ್ನ, ಪದ್ಮಭೂಷಣ ಉಸ್ತಾದ್ ಬಿಸ್ಮಿಲ್ ಖಾನ್ ಅವರು ಬನಾರಸ್‌ನಲ್ಲಿ ಒಂದು ಸಂದರ್ಭದಲ್ಲಿ ಶಹನಾಯ್ ನುಡಿಸಿದ್ದರು. ಅದನ್ನು ಕೇಳಿ ಸಂತಸಗೊಂಡ ಬಾಪೂಜಿ 'ಬಹುತ್ ಅಚ್ಛಾ ಹೈ' ಎಂದು ಹೆಗಲ ಮೇಲೆ ಕೈ ಇಟ್ಟು ಬೆನ್ನು ಸವರಿದ್ದರು. ಇದರಿಂದ ಸಂತುಷ್ಟಗೊಂಡ ಖಾನ್ ಸಾಹೇಬರು ಬಾಪೂಜಿ ಕೈ ಇಟ್ಟ ಮೇಲಂಗಿಯನ್ನು ತಕ್ಷಣವೇ ಕಳಚಿ ಮತ್ತೆಂದೂ ಅದನ್ನು ಹಾಕಿ ಕೊಳ್ಳಲಿಲ್ಲ. (ಬಾಪೂಜಿ ಕೈ ಇಟ್ಟು ಶಹಬ್ಬಾಸ್ ಹೇಳಿದ ಮೇಲೆ ಮತ್ತೊಬ್ಬರು ಆ ಅಂಗಿ ಮೇಲೆ ಕೈ ಇಟ್ರೆ ಅದು ಅಪವಿತ್ರವಾದೀತೇನೋ ಅನ್ನುವ ಭಾವದಿಂದ) ಅದನ್ನೊಂದು 'ಪವಿತ್ರ ವಸ್ತು' ವಾಗಿ ಗಾಂಧಿ ಸ್ಮರಣೆಗಾಗಿಯೇ ಕಡೆಯವರೆಗೂ ಇಟ್ಟುಕೊಂಡರು ಮತ್ತೂ ಅದೊಂದು 'ಅಮೂಲ್ಯವಾದ ವಸ್ತು' ಎಂದು ತಮ್ಮ ಸ್ಮೃತಿ ಪಟಲದಲ್ಲಿ ಖಾನ್ ಸಾಹೇಬರು ಇರಿಸಿಕೊಂಡಿದ್ದರು.
- ಭಾರತಕ್ಕೆ ಸ್ವಾತಂತ್ರ್ಯ ಕೇಳಲೆಂದು ಲಂಡನ್ ಚಕ್ರಗೋಷ್ಠಿಗೆ 1931ರಲ್ಲಿ ಬಾಪೂಜಿ ಹೋದಾಗ ಅವರು ಹೊದ್ದುಕೊಂಡಿದ್ದ ಅರ್ಧ ಮೇಲ್ಹೊತರದಲ್ಲಿ ಒಂದು ಎಳೆ ಜಾರಿ ಅರಮನೆಯ ಆವರಣದಲ್ಲಿ ಬಿದ್ದಿತ್ತು. ಅದನ್ನು ಗಮನಿಸಿದ ಬಂಕಿಂಗ್‌ಹ್ಯಾಮ್ ಅರಮನೆಯ ಕಾವಲುಗಾರ ತೆಗೆದುಕೊಂಡು ಬಲು ಜತನದಿಂದ ಅದು 'ಪವಿತ್ರವಾದ ವಸ್ತು' ಅಂದುಕೊಂಡು ತನ್ನ ಮನೆಯಲ್ಲಿ ಜೋಪನವಾಗಿಟ್ಟು ಕೊಂಡಿದ್ದ. ದಶಕದ ನಂತರ ಆ ಕಾವಲುಗಾರ ನಿವೃತ್ತಿಯಾಗಿ ತೀರಿಕೊಂಡ ಮೇಲೆ ಆತನ ಮೊಮ್ಮಗ ಅಂದು ಗಾಂಧೀಜಿಯವರ ಮೇಲ್ಹೊತರದಿಂದ ಜಾರಿ ಬಿದ್ದ ಆ ಖಾದಿಯ ಎಳೆಯನ್ನು ಮನೆಯಿಂದ ತಂದು ಲಂಡನ್ ಮ್ಯೂಸಿಯಂಗೆ ನೀಡಿದ.
- ಲಂಡನ್ ರಾಣಿಯ ಹುಟ್ಟು ಹಬ್ಬಕ್ಕೆಂದು ಮಹಾತ್ಮ ಗಾಂಧೀಜಿಯವರಿಗೆ ವಿಶೇಷವಾಗಿ ಆಹ್ವಾನ ಬಂದಿತ್ತು. ಜಗತ್ತಿನ ಅತಿ ಗಣ್ಯರ ಹೆಸರಿನ ಜೊತೆಗೆ ನಮ್ಮ ರಾಷ್ಟ್ರಪಿತನ ಹೆಸರನ್ನೂ ಸಹ ರಾಣಿ ಸೇರಿಸಿದ್ದರು. ಗಾಂಧೀಜಿಯವರು ಸ್ವಾತಂತ್ರ್ಯ ಹೋರಾಟದ ಬ್ಯುಸಿ ಶೆಡ್ಯೂಲ್ ನಲ್ಲಿರುವುದರಿಂದ ರಾಣಿಯ ಹುಟ್ಟು ಹಬ್ಬಕ್ಕೆ ಹೋಗಲಿಕ್ಕೆ ಆಗಲಿಲ್ಲ ಬದಲಾಗಿ ಉತ್ಕೃಷ್ಟವಾದ ಹತ್ತಿಯನ್ನು ತೆಗೆದುಕೊಂಡು ತಾವೇ ಸ್ವತಃ ಮೇಲೆ ಹೊದ್ದು ಕೊಳ್ಳುವ ಬಟ್ಟೆಯನ್ನು ಸಿದ್ದಮಾಡಿ ಉಡುಗೊರೆಯಾಗಿ ಲಂಡನ್‌ಗೆ ಕಳುಹಿಸಿ ಕೊಟ್ಟರು. ರಾಣಿಯ ಹುಟ್ಟುಹಬ್ಬ ಅಂದರೆ ಕೇಳಬೇಕೆ, ಪ್ರಪಂಚದ ಗಣ್ಯಾತಿ ಗಣ್ಯರು ಕೋಟಿ ಕೋಟಿ ಬೆಲೆ ಬಾಳುವ ಉಡುಗೊರೆಗಳನ್ನು ತಂದಿದ್ದರು. ಆ ನಡುವೆ ಭಾರತದಿಂದ ಬಂದ ಖಾದಿ ಬಟ್ಟೆಯನ್ನು ನೋಡಿ ಲಘುವಾಗಿ ಮಾತನಾಡಲು ಶುರು ಮಾಡಿದರು. ತಕ್ಷಣವೇ ಪ್ರತಿಕ್ರಿಯಿಸಿದ ರಾಣಿ ಉಡುಗೊರೆ ಯಾವುದು ಅನ್ನುವುದು ಮುಖ್ಯವಲ್ಲ ; ಆ ಉಡುಗೊರೆ ನನಗೆ ಅತ್ಯಂತ ಪ್ರಿಯವಾಗಿದೆ, ಅದನ್ನು ಕಳುಹಿಸಿದವರು ಮಹಾನ್ ವ್ಯಕ್ತಿ, ಅದು ಮುಖ್ಯ ನನಗೆ, ಅದರಿಂದ ನನ್ನ ಹುಟ್ಟು ಹಬ್ಬ ಮತ್ತಷ್ಟು ಉನ್ನತ ಮಟ್ಟಕ್ಕೇರಿತು ಎಂದು, ಆಡಿಕೊಳ್ಳುವವರ ಬಾಯಿ ಮುಚ್ಚಿಸಿದರು, ಇದು ಗಾಂಧಿ ಅವರ ಗ್ರೇಟ್‌ನೆಸ್.
- ಅದು 1922 ನೇ ಇಸ್ವಿ ಅಸಹಕಾರ ಚಳವಳಿಯು ರಾಷ್ಟ್ರವ್ಯಾಪಿಯಾಗಿ ಹಬ್ಬಿದ್ದ ಸಂದರ್ಭ. ಚೌರಿ ಚೌರಾ ಘಟನೆಯ ತರುವಾಯ, ಗಾಂಧೀಜಿಯವರನ್ನು ಅರೆಸ್ಟ್ ಮಾಡಿದ ಬ್ರಿಟಿಷ್‌ರು ಅವರ ಮೇಲೆ 'ರಾಷ್ಟ್ರದ್ರೋಹ'ದ ಕೇಸ್ ನ್ನು ಹಾಕಿದರು. ಅದರ ವಿಚಾರಣೆಗೆಂದು ಗಾಂಧೀಜಿಯವರು ಕೋರ್ಟ್ ನ ಜಡ್ಜ್ ಕೋಣೆಯನ್ನು ಪ್ರವೇಶ ಮಾಡಿದಾಗ, ಬ್ರಿಟಿಷ್ ಜಡ್ಜ್ ಬ್ರೂಮ್ ಫೀಲ್ಡ್ ಸೇರಿದಂತೆ ಇಡೀ ಕೋರ್ಟ್‌ಗೆ ಕೋರ್ಟೆ ಎದ್ದು ನಿಂತು ಗಾಂಧೀಜಿಗೆ ಗೌರವ ಸೂಚಿಸಿತು. ಒಂದು ಅರ್ಥದಲ್ಲಿ ರಾಜಕೀಯ ವೈರಿ ಮತ್ತು ಖೈದಿಯಾಗಿದ್ದರೂ ಸಹ ಬ್ರಿಟಿಷ್ ಕೋರ್ಟ್ ಒಳಗೆ ಗಾಂಧೀಜಿ ಬರುವಾಗ ತಲೆ ಬಾಗಿ ನಿಂತದ್ದು ವಿಶೇಷ ಅನಿಸುತ್ತದೆ. ಸೂರ್ಯ ಮುಳುಗದ ಸಾಮ್ರಾಜ್ಯ ಹೀಗೆ ಗೌರವ ಕೊಟ್ಟಿದ್ದು ಗಾಂಧೀಜಿಯವರಿಗೆ ಮಾತ್ರ.

(ಸಂಗ್ರಹ : ನೇತಾಜಿ ಗಾಂಧಿ)



# ವಿಶ್ವವಂದಿತ ವೈಷ್ಣವ ಜನತೊ

▪ ಸಿ.ಯು.ಬೆಳ್ಳಕ್ಕಿ

'ವೈಷ್ಣವ ಜನತೊ' ಎಂದ ತಕ್ಷಣ ನಮ್ಮ ಜ್ಞಾಪಕಕ್ಕೆ ಬರುವುದು ಮಹಾತ್ಮ ಗಾಂಧೀಜಿ. ವೈಷ್ಣವ ಜನತೊ ಹಾಗೂ ಗಾಂಧೀಜಿಯವರ ಸಂಬಂಧ ಅವಿನಾಭಾವ. ತೊಟ್ಟಿಲಿನಿಂದ ಪ್ರಾರಂಭಿಸಿ ಕೊನೆಯ ಉಸಿರು ಇರುವವರೆಗೆ ಅದು ಅವರ ಜೀವನದ ಉಸಿರೇ ಆಯಿತು. ಐದು ನೂರು ವರ್ಷಗಳ ಹಿಂದೆ 'ವೈಷ್ಣವ ಜನತೊ' ಭಕ್ತಿಗೀತೆಯನ್ನು ಗುಜರಾಥಿ ಭಾಷೆಯಲ್ಲಿ ರಚಿಸಿದವರು ಸಂತಕವಿ ನರಸಿಂಹ ಮೆಹತಾ. ಭಾರತೀಯ ಸ್ಥಳೀಯ ಭಾಷೆ ಗುಜರಾಥಿ ಈ ಭಕ್ತಿಗೀತೆಯೊಂದನ್ನು ವಿಶ್ವದ 124 ದೇಶಗಳಲ್ಲಿ ಅಲ್ಲಿನ ಹೆಸರಾಂತ ಕಲಾವಿದರು ಹಾಡಿದ್ದು, ನಂತರ ಎಲ್ಲ ಧ್ವನಿಗಳು ಸೇರಿ ಫ್ಯೂಜನ್ ರೂಪದಲ್ಲಿ ಮೂಡಿಬಂದದ್ದು ಸಾಹಿತ್ಯ, ಸಂಗೀತ ಜಗತ್ತಿನ ಒಂದು ವಿಸ್ಮಯವೇ ಆಗಿದೆ. ಸಂಗೀತಮಯವಾಗಿ ಮಹಾತ್ಮಾಗಾಂಧೀಜಿ ಅವರಿಗೆ ಸಲ್ಲಿಸಿದ ಅಪೂರ್ವ ವಿನೂತನ ಗೌರವ ಇದಾಗಿದೆ. ಗಾಂಧೀಜಿಯವರ ನೆಚ್ಚಿನ ವೈಷ್ಣವ ಜನತೊ ಇಂದಿಗೂ ದೇಶದಲ್ಲಷ್ಟೇ ಅಲ್ಲ, ವಿಶ್ವದ ನೂರಾರು ರಾಷ್ಟ್ರಗಳ ಜನರ ನಾಲಿಗೆಯ ಮೇಲೆ ನಲಿಯುತ್ತಾ ಇರುವುದು ಅದ್ಭುತ, ಅವಿಸ್ಮರಣೀಯ.

ಗಾಂಧೀಜಿಯವರ 150ನೆಯ ಜನ್ಮೋತ್ಸವ ಆಚರಣೆಯ ಅಂಗವಾಗಿ ಈ ವಿನೂತನ ಕಾರ್ಯಕ್ರಮವನ್ನು ಯೋಜಿಸಿ ಸಾಕಾರಗೊಳಿಸಿದ ಶ್ರೇಯ ನಮ್ಮ ದೇಶದ ವಿದೇಶಾಂಗ ವ್ಯವಹಾರ ಸಚಿವಾಲಯಕ್ಕೆ ಸಲ್ಲುತ್ತದೆ. 124 ದೇಶಗಳಲ್ಲಿರುವ ನಮ್ಮ ರಾಯಭಾರಿ ಕಚೇರಿಗಳು ಆಯಾ ದೇಶಗಳಲ್ಲಿ ಹಾಡಿನ ಶ್ರವ್ಯ, ದೃಶ್ಯ ಚಿತ್ರೀಕರಣ, ಧ್ವನಿಮುದ್ರಣದ ನಿರ್ವಹಣೆಯನ್ನು ಅಚ್ಚುಕಟ್ಟಾಗಿ ಮಾಡಿದ್ದಾರೆ. ಸಂಗೀತಮಯ ಗೌರವಾರ್ಪಣೆ ನೀಡಲು 124 ದೇಶಗಳು ಭಾಗಿಯಾಗಿದ್ದು ಅವಿಸ್ಮರಣೀಯ. ಆಯಾ ದೇಶದ ವೇಷ ಭೂಷಣ, ಸುಂದರ ದೃಶ್ಯಗಳ ಹಿನ್ನೆಲೆಯಲ್ಲಿ ಚಿತ್ರೀಕರಿಸಿದಾಗ ಈ ವೀಡಿಯೊ ಭಾವಪೂರ್ಣ, ಮನಮೋಹಕ. ಸ್ಥಳೀಯ ಕಂಪಿನಿಂದ ಕಂಗೊಳಿಸಿ ವೈವಿಧ್ಯದಿಂದ ಕೂಡಿದ, ವರ್ಣರಂಜಿತ ಮಂತ್ರ ಮುಗ್ಧಗೊಳಿಸುವ ಪ್ರಸ್ತುತಿ 'ವೈಷ್ಣವ ಜನತೊ' ನೂರಾರು ದೇಶಗಳ ಸಾವಿರಾರು ಧ್ವನಿಯ ವೀಡಿಯೊ ನೋಡುವುದೇ, ಕೇಳುವುದೇ ಒಂದು ರೋಮಾಂಚಕ ಅನುಭವ.

124 ದೇಶಗಳನ್ನು ಆಫ್ರಿಕಾ, ಯುರೋಪ್, ಆಶಿಯಾನ್, ಲ್ಯಾಟಿನ್ ಅಮೇರಿಕಾ, ಕೆರೆಬಿಯನ್, ಉತ್ತರ ಅಮೇರಿಕಾ, ದಕ್ಷಿಣ ಅಮೇರಿಕಾ, ಅಲ್ಲದೆ ನಮ್ಮ ನೆರೆಯ ರಾಷ್ಟ್ರಗಳು, ಹೀಗೆ ಮಹಾದ್ವೀಪಗಳ ಅನುಸಾರವಾಗಿ ವಿಂಗಡಿಸಲಾಗಿದೆ. ಪ್ರತಿಯೊಂದು ಮಹಾದ್ವೀಪದ ರಾಷ್ಟ್ರಗಳು ಹಾಡಿದ್ದನ್ನು ಬೇರೆ ಬೇರೆ ಫ್ಯೂಜನ್ನ ಮಾಡಲಾಗಿದೆ. ಎಲ್ಲ ಮಹಾದ್ವೀಪಗಳಿಂದ ಪ್ರಾತಿನಿಧಿಕವಾಗಿ ಆಯ್ದ 41 ರಾಷ್ಟ್ರಗಳ ಕಲಾವಿದರು ಹಾಡಿದ ಐದೂವರೆ ನಿಮಿಷಗಳ ಒಂದು ವಿಶೇಷ ಫ್ಯೂಜನ್ ಸಿದ್ಧಪಡಿಸಲಾಗಿದೆ. ಭಾಷೆ ತಿಳಿಯದಿದ್ದರೂ ಸರಿಯಾದ ಉಚ್ಚರಣೆ, ಧುನ್‌ನಲ್ಲಿ ಸುಂದರವಾಗಿ ಹಾಡಿದ್ದಾರೆ. ಈ ಫ್ಯೂಜನ್ ಮೆಡ್ಲೆಯಲ್ಲಿ ಪುಟ್ಟ ದ್ವೀಪ ರಾಷ್ಟ್ರ ನೌರೂದ ಅಧ್ಯಕ್ಷ ಬೇರನ್ ವಾಖಾ ಸ್ವತಃ ಹಾಡಿದ್ದು ಒಂದು

ವಿಶೇಷ. ಈ ಫ್ಯೂಜನ್‌ನಲ್ಲಿ ಭಾಗಿಯಾದ ದೇಶಗಳು: ಶ್ರೀಲಂಕಾ, ಮಾಲ್ದೀವ್ಸ್, ಲಾವೋಸ್, ನೇಪಾಳ, ಅಫಗಾನಿಸ್ತಾನ್, ಕೊಲಂಬಿಯಾ, ಕೆನಡಾ, ಕಝುಕಿಸ್ತಾನ, ಓಮಾನ್, ಅಜರ್‌ಬೈಜಾನ್, ಚೀನಾ, ಜರ್ಮನಿ, ಬಾಂಗ್ಲಾದೇಶ, ಸಿಂಗಾಪೂರ, ಮಂಗೋಲಿಯಾ, ಅರಮೇನಿಯಾ, ತರ್ಕಮೇನಿಸ್ತಾನ, ಇಟಲಿ, ಬಹರೇನ್, ಇರಾನ, ಸೌದಿ ಅರೇಬಿಯಾ, ಪಾಕಿಸ್ತಾನ, ನೈಜೀರಿಯಾ, ಡೆನ್ಮಾರ್ಕ್, ಫಿನ್‌ಲ್ಯಾಂಡ್, ಮಯನ್ಮಾರ್, ಕ್ಯೂಬಾ, ಪಾಪುವಾ, ನ್ಯೂಗಿನಿಯಾ, ರಷಿಯಾ, ಸ್ಪೇನ್, ಟುನೀಷಿಯಾ, ನಮೀಬಿಯಾ, ಇರಾಕ್, ತಾಂಜಾನಿಯಾ ಮತ್ತು ಜಪಾನ.

'ವೈಷ್ಣವ ಜನತೊ' ಗಾಂಧೀಜಿಯವರ ಅತಿ ನೆಚ್ಚಿನ ಭಜನ್ ಆಗಿತ್ತು. ಆಶ್ರಮದಲ್ಲಿ ಪ್ರತಿದಿನ ಅದನ್ನು ಹಾಡಲಾಗುತ್ತಿತ್ತು. ಸಾಬರಮತಿ ಆಶ್ರಮದಲ್ಲಿ ಸಮೂಹಗಾನದಲ್ಲಿ ಹಾಡುವ ಭಜನೆಗಳನ್ನು ಸ್ವರ ವಿನ್ಯಾಸಮಾಡಿ ಸಂಗೀತ ಸಂಯೋಜನೆ ಮಾಡಿದವರು ಖ್ಯಾತ ಹಿಂದುಸ್ತಾನಿ ಗಾಯಕ ಹಾಗೂ ಸಂಗೀತಜ್ಞ ದಿಗಂಬರ್ ಪಲುಸ್ಕರ್ ಅವರ ಶಿಷ್ಯ ನಾರಾಯಣ ಖರೆ.

**ಯಾರು ಇತರರ ದುಃಖ ಅರಿತುಕೊಳ್ಳುವರೊ, ಉಪಕಾರ ಮಾಡಿದ ಬಗ್ಗೆ ಮನಸ್ಸಿನಲ್ಲಿ ಅಹಂಕಾರ ಬೆಳೆಸಿಕೊಳ್ಳುವುದಿಲ್ಲವೊ, ಯಾರು ಯಾರದೆ ನಿಂದನೆಯನ್ನು ಮಾಡುವುದಿಲ್ಲವೊ, ಮಾತು ಕೆಲಸ ಹಾಗೂ ಮನಸ್ಸನ್ನು ಧೃಢವಾಗಿ ಇಟ್ಟುಕೊಳ್ಳುತ್ತಾರೋ ಯಾರಿಗೆ ಪರಸ್ತ್ರಿ ತಾಯಿಯಂತೆ ಕಾಣುತ್ತಾರೊ, ಯಾರು ಅಸತ್ಯ ನುಡಿಯುವುದಿಲ್ಲವೊ, ಯಾರು ಇತರರ ಧನಕ್ಕೆ ಆಸೆ ಪಡುವುದಿಲ್ಲವೊ, ಎಲ್ಲರನ್ನು ಸಮದೃಷ್ಟಿಯಿಂದ ನೋಡುತ್ತಾರೋ, ಮೋಹಮಾಯೆಯಲ್ಲಿ ಸಿಲುಕಿಕೊಳ್ಳುವುದಿಲ್ಲವೊ ಅವರೇ ನಿಜವಾದ ವಿಷ್ಣುಭಕ್ತರು.**

ಇದು ಆ ಗೀತೆಯ ಸಾರ.

ಜನಪ್ರಿಯವಾಗಿರುವ ರಾಗ ಮಿಶ್ರ ಖಮಾಜ ಆಧಾರಿತ ವೈಷ್ಣವ ಜನತೊ ಒಂದು ಠುಮರಿ ಎಂದೇ ಪರಿಗಣಿಸಲಾಗುತ್ತದೆ. ಸಂಗೀತಮಯವಾಗಿ ಇದನ್ನು ಧುನ್ ಇಲ್ಲವೆ ವಿಸ್ತರಿಸಬಹುದಾದ ಸ್ವರವಿನ್ಯಾಸವಾಗಿ ಬಳಸಿಕೊಳ್ಳಲಾಗುತ್ತದೆ. ಈ ಭಜನ್ ಸಂಗೀತ ಲೋಕದ, ವಿಶೇಷವಾಗಿ ಹಿಂದುಸ್ತಾನೀ ಗಾಯಕರ, ವಾದಕರ ನೆಚ್ಚಿನ ಕೃತಿಯಾಗಿದೆ. ಶಂಕರಮಹಾದೇವನ್, ಅಲ್ಕಾ ಯಾಜ್ಞಿಕ್, ಜಸ್ವಿಂದರ್ ನರೂಲಾ, ಸೋನು ನಿಗಮ್, ಶಾರಂಗದೇವ ಮನಮಿಡಿಯುವಂತೆ ಹಾಡಿದ್ದಾರೆ. ಶಿವಕುಮಾರ ಶರ್ಮಾ, ಅಮ್ಜದಲಿಖಾನ್, ಹರಿಪ್ರಸಾದ ಚೌರಾಸಿಯಾ, ಬಿಸಮಿಲ್ಲಾಖಾನ್ ಅವರಂತಹ ಖ್ಯಾತ ಸಂಗೀತಗಾರರು ತಮ್ಮ ವಾದ್ಯದಲ್ಲಿ ಇದನ್ನು ನುಡಿಸಿದ್ದಾರೆ. ಈ ಭಕ್ತಿಗೀತೆಯ ಪ್ರಸ್ತುತಿಯನ್ನು ಒಂದೇ ಅಲಬಮ್ಮಿನಲ್ಲಿ ಹೊರತರಲಾಗಿದೆ. ಅದರಲ್ಲಿ ವಿದೂಷಿ ಗಂಗೂಬಾಯಿ ಹಾನಗಲ್, ಪಂಡಿತ ಜಸರಾಜ್, ಪಾಪ್ ಹಾಡುಗಾರ ರೇಮೊ ಫರ್ನಾಂಡಿಸ್ ಹಾಡಿದ್ದಾರೆ. ಗಾನಕೋಗಿಲೆ ಎಮ್ ಎಸ್ ಸುಬ್ಬಲಕ್ಷ್ಮಿ ಕರ್ನಾಟಕ ಸಂಗೀತದ ಮೆರಗನ್ನು ನೀಡಿದ್ದಾರೆ. ಭಾರತರತ್ನ ಲತಾ ಮಂಗೇಶಕರ್ ಹಾಡಿದ ವೈಷ್ಣವ ಜನತೊ ಕೇಳುಗರಿಗೆ ಗುಂಗು ಹಿಡಿಸಿದೆ. ಹಿಂದಿ ಇಂಗ್ಲೀಷ್ ಹಾಗೂ ಅನೇಕ ಭಾರತಿಯ ಭಾಷೆಗಳ ಚಲನಚಿತ್ರಗಳಲ್ಲಿ ಈ ಗೀತೆಯನ್ನು ಬಳಸಿಕೊಳ್ಳಲಾಗಿದೆ.

ರಾಜ್ಯವ್ಯಾಪಿ ನಂತರ, ರಾಷ್ಟ್ರವ್ಯಾಪಿಯಾದ ಮಹಾತ್ಮಾಗಾಂಧೀಜಿಯವರ ನೆಚ್ಚಿನ ವೈಷ್ಣವ ಜನತೊ ಈಗ ವಿಶ್ವವ್ಯಾಪಿಯಾಗಿದೆ, ವಿಶ್ವವಂದಿತವಾಗಿದೆ. 124 ರಾಷ್ಟ್ರಗಳ ಕಲಾವಿದರು ಇದನ್ನು ಹಾಡಿದ್ದು ಮಹಾತ್ಮಾ ಗಾಂಧೀಜಿಯವರಿಗೆ ತೋರಿದ ಅಪೂರ್ವ ಗೌರವವಾಗಿದೆ, ಭಾರತದ ಹೆಮ್ಮೆಯಾಗಿದೆ. ■




ಚಿತ್ರ : ಬಿ.ಜಿ. ಗುಜ್ಜಾರಪ್ಪ






# ಬಿ. ಕೆ. ಭಂಡಾರಿ

– ಚರಣ್ ಐವರ್ನಾಡು

ಅಸ್ಸಾಮಿನ ಸ್ವಾತಂತ್ರ್ಯ ಹೋರಾಟಗಾರರು, ಸಮಾಜ ಸುಧಾರಕ ಮತ್ತು ಗಾಂಧಿ ಚಿಂತನೆಯ ಪ್ರಬಲ ಪ್ರತಿಪಾದಕರಲ್ಲಿ 'ಬಿ ಕೆ ಭಂಡಾರಿ'ಯವರು ಓರ್ವರು. ನಾನು ಈಶಾನ್ಯ ಭಾರತದ ಪ್ರವಾಸದಲ್ಲಿದ್ದಾಗ ಗುವಾಹಟಿಯ ಕಸ್ತೂರ್ಬಾ ಗಾಂಧಿ ಆಶ್ರಮದಲ್ಲಿ ಉಳಿದುಕೊಂಡಿದ್ದೆ. ಆ ಆಶ್ರಮದ ಗೋಡೆಯ ಮೇಲೆ ಅಸ್ಸಾಮಿನ ಮಹನೀಯರ ಭಾವಚಿತ್ರಗಳ ಮಧ್ಯೆ ಬಿ ಕೆ ಭಂಡಾರಿಯವರ ಚಿತ್ರವೂ ಇತ್ತು. ಕುತೂಹಲದಿಂದ ಅವರೆಲ್ಲರ ಬಗ್ಗೆ ಆಶ್ರಮವಾಸಿಗಳಲ್ಲಿ ಕೇಳುವಾಗ ಬಿ ಕೋಚಣ್ಣ ಭಂಡಾರಿಯವರ ಹೆಸರು ನನ್ನ ಕುತೂಹಲವನ್ನು ಕೆರಳಿಸಿತು. ಇದಂತು ಅಪ್ಪಟ ಕರಾವಳಿಯ ಬಂಟ ಸಮುದಾಯದ ಹೆಸರು !

ಆಶ್ರಮದಲ್ಲಿ ನಡೆದ ಕಾರ್ಯಕ್ರಮಕ್ಕೆ ಬಿ ಕೆ ಭಂಡಾರಿಯವರ ಮಗಳು ನಯನ್ ಭಂಡಾರಿ ಶರ್ಮ ಬಂದಿದ್ದರು. ಇವರು ಅಸ್ಸಾಮಿನ ಲೋಕೋಪಯೋಗಿ ಇಲಾಖೆಯಲ್ಲಿ ಮುಖ್ಯ ಇಂಜಿನೀಯರ್ ಆಗಿ ನಿವೃತ್ತಿ ಹೊಂದಿದವರು. ಕಾರ್ಯಕ್ರಮದಲ್ಲಿ ಮಂಗಳೂರಿನ ನಾನು ಇದ್ದದ್ದನ್ನು ಅರಿತ ಅವರು ತಮ್ಮ ತಂದೆ ಮಂಗಳೂರು ಸಮೀಪದವರು, ಮಹಾತ್ಮ ಗಾಂದಿಯವರು ಮಂಗಳೂರಿಗೆ ಬಂದಿದ್ದಾಗ ಅವರೊಂದಿಗೆ ಅಸ್ಸಾಮಿಗೆ ತಮ್ಮ ಪತ್ನಿಯೊಂದಿಗೆ ಬಂದು ಇಲ್ಲಿಯೇ ನೆಲೆಸಿದರು ಎಂದರು. ಮಂಗಳೂರಿನ ಬಜ್ಪೆಯ ಸಮೀಪದ ಬೈಲು ಕೋಚಣ್ಣ ಭಂಡಾರಿಯವರು ಅಸ್ಸಾಮಿನ ಓರ್ವ ರಾಷ್ಟ್ರೀಯ ಚಳುವಳಿಯ ಹೋರಾಟಗಾರ!

ಮಹಾತ್ಮ ಗಾಂಧೀಜಿಯವರು ಮಂಗಳೂರಿಗೆ ಮೂರು ಬಾರಿ ಬೇಟಿ ನೀಡಿದ್ದಾರೆ. 1920ರಲ್ಲಿ ಅಸಹಕಾರ ಚಳುವಳಿಯನ್ನು ಆರಂಭಿಸಿ ಅದರೊಂದಿಗೆ ಖಿಲಾಫತ್ ಚಳುವಳಿಗೆ ಭಾರತೀಯರ ಬೆಂಬಲ ಪಡೆಯಲು ಆಲಿ ಸಹೋದರರೊಂದಿಗೆ ರಾಷ್ಟವ್ಯಾಪಿ ಖಿಲಾಫತ್ ಪ್ರವಾಸ ಕೈಗೊಂಡು 19 ನೇ ಅಗಸ್ಟ್ 1920 ಕೇಂದ್ರ ಮೈದಾನದಲ್ಲಿ ಸಾರ್ವಜನಿಕ ಭಾಷಣ ಮಾಡಿದ್ದರು. ಸ್ವದೇಶಿ ಖಾದಿಯ ಪ್ರಚಾರ ಮಾಡುತ್ತಾ 26ನೇ ಅಕ್ಟೋಬರ್ 1927ರಂದು ಮಂಗಳೂರಿನಲ್ಲಿ ಜನತೆಯನ್ನು ಉದ್ದೇಶಿಸಿ ಮಾತನಾಡಿದ್ದರು. 1933–34ರಲ್ಲಿ ಗಾಂಧೀಜಿಯವರ ಅಸ್ಪೃಶ್ಯತೆಯ ವಿರುದ್ಧ ಅರಿವು ಮೂಡಿಸಲು ದೇಶಪ್ರವಾಸ ಮಾಡಿದಾಗ ಅವರು ಮಂಗಳೂರಿಗೆ ಮೂರನೇಯ ಭೇಟಿ ನೀಡಿದ್ದರು. 24ನೇ ಫೆಬ್ರವರಿ 1934ರಂದು ಮಡಿಕೇರಿಯಿಂದ ಸಂಪಾಜೆ, ಸುಳ್ಯ ಮೂಲಕ ಪುತ್ತೂರನ್ನು ತಲುಪಿ ಸಾರ್ವಜನಿಕ ಭಾಷಣ ಮಾಡಿದ್ದರು. ಅಲ್ಲಿನ ಹರಿಜನಕೇರಿಗೆ ಭೇಟಿ ನೀಡಿದ್ದರು. ಅಲ್ಲಿಂದ ಮಂಗಳೂರಿಗೆ ಬಂದು ನಾಲ್ಕು ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದರು. ಈ ಮೂರು ಭೇಟಿಗಳು ಕರಾವಳಿಯಲ್ಲಿ ಸ್ವಾತಂತ್ರ್ಯ ಹೋರಾಟದ ಕಿಚ್ಚನ್ನು ಹೆಚ್ಚಿಸಿದವು. ಅನೇಕ ತರುಣರು ರಾಷ್ಟ್ರೀಯ ಚಳುವಳಿಗೆ ಧುಮುಕಿದರು. ಅಂತ ಮಹನೀಯರಲ್ಲಿ ಬೈಲು ಕೋಚಣ್ಣ ಭಂಡಾರಿ ಓರ್ವರು.

ಬೈಲು ಕೋಚಣ್ಣ ಭಂಡಾರಿಯವರು 1935ರಲ್ಲಿ ಮಂಗಳೂರಿನ ಬಜ್ಪೆಯಲ್ಲಿ ವಾಸಿಸುತ್ತಿದ್ದರೆಂದು ಶಿವರಾಮ ಕಾರಂತರು ಹೇಳುತ್ತಾರೆ. ಇವರ ಪತ್ನಿ ಸಾವಿತ್ರಿಯವರು ಕಾರಂತರ ಪತ್ನಿ ಲೀಲಾರವರ ಸಹೋದರಿ. ಕಾಂಗ್ರೇಸಿನ ಸಕ್ರೀಯ ಕಾರ್ಯಕರ್ತರಾಗಿದ್ದ ಬಿ ಕೆ ಭಂಡಾರಿಯವರು ಪ್ರಸಿದ್ಧ ಸಮಾಜ ಸೇವಕ 'ಥಕ್ಕರ್ ಬಾಪಾ'ರ ಅನುಯಾಯಿಯಾಗಿದ್ದರು. 1933ರಲ್ಲಿ ಗಾಂಧೀಜಿ ಅಸ್ಪೃಶ್ಯತೆಯ ವಿರುದ್ಧ ಅರಿವು ಮೂಡಿಸಲು 'ಹರಿಜನ ಸೇವಾ ಸಂಘ' ಸ್ಥಾಪಿಸಿ ಭಾರತದಾದ್ಯಂತ ಪ್ರವಾಸ ಆರಂಭಿಸಿದರು. ಥಕ್ಕರ್ ಬಾಪಾ ಈ ಸಂಘದ ಕಾರ್ಯದರ್ಶಿಯಾಗಿ ಅಸ್ಸಾಂನಲ್ಲಿ ಪರಿಶಿಷ್ಟ ಜಾತಿ ಮತ್ತು ವರ್ಗಗಳ ಸೇವೆ ಮಾಡುತ್ತಿದ್ದರು. ಇದು



ಗಾಂಧೀಜಿಯವರೊಡನೆ ಬಿ ಕೆ ಭಂಡಾರಿ ..



ಅಸ್ಸಾಂ ನಲ್ಲಿ ಅವರ ನೆನಪು ..

**ಅಹಿಂಸೆಗೆ ಎರಡು ನಂಬಿಕೆಗಳು ಬೇಕಾಗುತ್ತದೆ. ದೇವರು ಮೇಲೆ ನಂಬಿಕೆ ಇದ್ದಂತೆಯೇ ಮನುಷ್ಯನ ಮೇಲೆಯೂ ವಿಶ್ವಾಸ ಇರಬೇಕು.**

* * *

**ಬಲಿಷ್ಠತೆ ಎನ್ನುವುದು ನಿಮ್ಮ ದೈಹಿಕ ಸಾಮರ್ಥ್ಯದಿಂದ ಬರುವಂಥದಲ್ಲ; ಅದು ಅದಮ್ಯ ಅಂತಃಶಕ್ತಿಯಿಂದ ಬರುವಂಥದ್ದು.**

ಬಿ ಕೆ ಭಂಡಾರಿಯವರನ್ನು ಆಕರ್ಷಿಸಿ 1936ರಲ್ಲಿ ಅಸ್ಸಾಂ ಕಡೆ ಪಯಣ ಬೆಳೆಸುವಂತೆ ಮಾಡಿತು. ಗಾಂಧೀಜಿಯವರ ಪ್ರವಾಸಗಳಲ್ಲಿ ಅವರ ಕಾರನ್ನು ಬಿ.ಕೆ. ಭಂಡಾರಿಯವರೇ ಚಲಾಯಿಸುತ್ತಾರೆ. ಕಾಮರೂಪವನ್ನು ಕೇಂದ್ರವಾಗಿಟ್ಟುಕೊಂಡು ಸೇವೆಯನ್ನು ಅರಂಭಿಸಿದ ಭಂಡಾರಿಯವರು ಬಕ್ಸಾ ಎಂಬ ಜಾಗದ ಶೈಕ್ಷಣಿಕವಾಗಿ ಮತ್ತು ಸ್ವಚ್ಛತೆಯಲ್ಲಿ ಹಿಂದುಳಿದಿದ್ದ ಬೋರೊ ಮೊದಲಾದ ಬುಡಕಟ್ಟುಗಳ ಸೇವೆಯನ್ನು ಮಾಡುತ್ತಾರೆ. ಇದು ದಟ್ಟವಾದ ಕಾಡಿನಿಂದ ಆವೃತವಾದ ಸ್ಥಳವಾಗಿದ್ದು ಮಲೇರಿಯಾ, ಕಾಲಾರಗಳಿಂದ ಬಾಧಿತವಾಗಿತ್ತು. ಈ ಪ್ರದೇಶವನ್ನು ಅಭಿವೃದ್ಧಿಪಡಿಸಲು ಶ್ರಮಿಸುತ್ತಾರೆ.

ಕೋಚಣ್ಣ ಭಂಡಾರಿಯವರ ಮೊದಲ ಪತ್ನಿ ಸುಮತಿಯವರು ಅಸ್ಸಾಮಿನಲ್ಲಿ ಮರಣಹೊಂದಿದ ನಂತರ ಅವರು ಮಂಗಳೂರು ಮೂಲದ 'ಸಾವಿತ್ರಿ ಆಳ್ವ'ರನ್ನು ವಿವಾಹವಾಗುತ್ತಾರೆ. ಸಾವಿತ್ರಿಯವರು ತುಳು ಮೂಲದವರಾದರೂ ಅಸ್ಸಾಮಿ ಕಲಿತು ಅಸ್ಸಾಮಿ ಬಟ್ಟೆ ತೊಡಲು ಆರಂಭಿಸಿದರು. ಹೈನುಗಾರಿಕೆ, ಜೇನು, ಹೂದೋಟ, ತರಕಾರಿ ಮೊದಲಾದವನ್ನು ಬೆಳೆಸುವ ಅರಿವನ್ನು ಇವರು ಅಲ್ಲಿಯ ಮಹಿಳೆಯರಲ್ಲಿ ಮೂಡಿಸಿದರು. ಕೋಚಣ್ಣ ಭಂಡಾರಿಯವರಿಗೆ ಡಾ.ಸುಮನ್, ನಯನ್ ಭಂಡಾರಿ ಶರ್ಮ, ಶೋಭನ್ ಭಂಡಾರಿ ದೇಕಾ ಮತ್ತು ಮಲಯ ಭಂಡಾರಿ ದೇಕಾ ಎಂಬ ಪುತ್ರಿಯರು ಹಾಗೂ ಮೋಹನದಾಸ್ ಎಂಬ ಓರ್ವ ಪುತ್ರ. ಇವರಲ್ಲಿ ಡಾ. ಸುಮನ್ ಮರಣಹೊಂದಿದ್ದು ಉಳಿದವರೆಲ್ಲರೂ ಕುಟುಂಬದೊಂದಿಗೆ ಅಸ್ಸಾಮಿನಲ್ಲೇ ನೆಲೆಸಿದ್ದಾರೆ.



ಬಿ ಕೆ ಭಂಡಾರಿಯವರ ಪುತ್ರಿ ನಯನ ಭಂಡಾರಿ ಶರ್ಮ ಅಸ್ಸಾಂ ನಲ್ಲಿ ತಂದೆಯವರ ಸೇವಾ ಕಾರ್ಯ ಮುಂದುವರಿಸುತ್ತಿದ್ದಾರೆ ..

ಕೋಚಣ್ಣ ಭಂಡಾರಿಯವರು ಅಸ್ಸಾಮಿನ ಬರಮದಲ್ಲಿ ಆರಂಭಿಸಿದ ಅಸ್ಸಾಂ ಸೇವಾ ಸಂಘ್ ಬಕ್ಸಾ, ಬರಮ ಮೊದಲಾದ ಹಿಂದುಳಿದ ಪ್ರದೇಶಗಳಲ್ಲಿ ಶಾಲೆಗಳು, ವಸತಿ ನಿಲಯಗಳ ಮತ್ತು ಆರೋಗ್ಯ ಕೇಂದ್ರಗಳನ್ನು ಆರಂಭಿಸಿತು. ಭಂಡಾರಿಯವರು ಅಸ್ಸಾಮಿನಲ್ಲಿ ಸೇವೆಯನ್ನು ಆರಂಭಿಸುವಾಗ ಅನೇಕ ಕೊರತೆಗಳಿದ್ದವು. ಸಂಘದ ಕಟ್ಟಡದ ನಿರ್ಮಾಣದ ಕೆಲಸವನ್ನು ಸ್ವತಃ ತಾವೇ ಮಾಡಿದ್ದರು. ಈ ಸಂಘದ ಅಡಿಯಲ್ಲಿ ಗೋರೊ, ಖಾಸಿ ಮೊದಲಾದ ಗಿರಿ ಪ್ರದೇಶಗಳಲ್ಲಿ ಕುಷ್ಠರೋಗಿಗಳ ಚಿಕಿತ್ಸಾ ಕೇಂದ್ರವನ್ನು ತೆರೆದಿದ್ದರು. ಮಂಗಳೂರಿನ ಬೈಲು ಕೋಚಣ್ಣ ಭಂಡಾರಿಯವರು ಅಸ್ಸಾಮಿನ ಜನತೆಯ ಸೇವೆಯನ್ನು ಮಾಡಿ ಅಜರಾಮರರಾಗಿದ್ದಾರೆ.

ಅಸ್ಸಾಮಿನ ಜನರು ಭಂಡಾರಿಯವರಲ್ಲಿ ಓರ್ವ ಸಂತನನ್ನು ಕಂಡಿದ್ದಾರೆ. ಗಾಂಧಿಯ ಕರೆಗೆ ಓಗೊಟ್ಟು ಅಸ್ಸಾಮಿಗೆ ಧಾವಿಸಿ ತನ್ನ ಜೀವನದ ಬಹುತೇಕ ಕಾಲವನ್ನು ಜನಸೇವೆಗೆ ಮೀಸಲಿಟ್ಟ ಮಹಾ ಗಾಂಧೀವಾದಿ ಬೈಲು ಕೋಚಣ್ಣ ಭಂಡಾರಿಯವರು ಕರಾವಳಿಯ ಹೆಮ್ಮೆ.

**(ಬಿ.ಕೆ. ಭಂಡಾರಿಯವರು ತೀರಿಕೊಂಡು ಎಪ್ಪತ್ತು ವರ್ಷಗಳು ಸಂದಿವೆ)**




# ಮ್ಯಾಡಮ್ ಭಿಕಾಜಿ ರುಸ್ತಮ್ ಕಾಮಾ:

# ಭಾರತದ ಧ್ವಜವನ್ನು ಹಾರಿಸಿದ ಮೊದಲ ಮಹಿಳೆ

– ಡಾ. ಎಸ್.ಬಿ. ಬಸೆಟ್ಟಿ

**ಭಾ**ರತದ ರಾಷ್ಟ್ರೀಯ ಧ್ವಜ ನಿರ್ಮಾಣದ ಇತಿಹಾಸದಲ್ಲಿ ಮ್ಯಾಡಮ್ ಭಿಕಾಜಿ ರುಸ್ತಮ್ ಕಾಮಾ ಅವರ ಹೆಸರು ಸುವರ್ಣಾಕ್ಷರಗಳಲ್ಲಿ ಬರೆಯಲ್ಪಟ್ಟಿದೆ. ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸುತ್ತಿದ್ದ ದೇಶಪ್ರೇಮಿಗಳು ಭಾರತೀಯರೆಲ್ಲರೂ ಬ್ರಿಟಿಷ್ ಆಡಳಿತದ ವಿರುದ್ಧ ಹೋರಾಡಲು ಒಂದಾಗಬೇಕಾದರೆ ಅವರ ಗಮನ ಕೇಂದ್ರಿಕರಿಸುವುದಕ್ಕೆ, ಅವರು ಏಕೀಕೃತವಾದ ನಿಷ್ಠೆಯನ್ನು ಸಲ್ಲಿಸುವುದಕ್ಕೆ ರಾಷ್ಟ್ರಧ್ವಜವೊಂದರ ಅವಶ್ಯಕತೆಯನ್ನು ಮನಗಂಡರು. ಫ್ರಾನ್ಸಿನಲ್ಲಿ ಆಶ್ರಯ ಹೊಂದಿದ್ದ ಮೇಡಮ್ ಕಾಮಾ ಮತ್ತು ಮಿತ್ರರು ಮೊಟ್ಟ ಮೊದಲಿಗೆ 1906ರಲ್ಲಿ ಒಂದು ರಾಷ್ಟ್ರೀಯ ಧ್ವಜವನ್ನು ಕಲ್ಪಿಸಿದರು. ಇದರಲ್ಲಿ ಮೇಲಿಂದ ಅನುಕ್ರಮವಾಗಿ ಕೇಸರಿ, ಬಿಳಿ ಮತ್ತು ಹಸಿರು ಅಡ್ಡಪಟ್ಟಿಗಳಿದ್ದವು. ಮೇಲಿನ ಪಟ್ಟಿಯಲ್ಲಿ 8 ತಾರೆಗಳಿದ್ದವು. ಬಿಳಿಯ ಪಟ್ಟಿಯ ಮೇಲೆ ದೇವನಾಗರಿ ಲಿಪಿಯಲ್ಲಿ 'ವಂದೇ ಮಾತರಮ್' ಎಂಬ ಲಿಖಿತವಿತ್ತು. ಕೆಳಗಿನ ಪಟ್ಟಿಯ ಮೇಲೆ ಸೂರ್ಯ ಮತ್ತು ಅರ್ಧಚಂದ್ರನ ಚಿಹ್ನೆಗಳಿದ್ದವು. ಇದು ಭಾರತದಲ್ಲಿ ಪ್ರಚಾರದಲ್ಲಿ ಬರಲಿಲ್ಲ.

ಮ್ಯಾಡಮ್ ಕಾಮಾ ಅವರು ನಮ್ಮ ಸ್ವಾತಂತ್ರ್ಯ ಹೋರಾಟವನ್ನು ವಿದೇಶದಿಂದ ಬೆಂಬಲಿಸಿದವರಲ್ಲಿ ಒಬ್ಬರು. ಅವರು ವಿದೇಶೀ ನೆಲದಲ್ಲಿ ಭಾರತದ ಧ್ವಜ ಹಾರಿಸಿದವರಲ್ಲಿ ಮೊದಲಿಗರು. ಅವರು ಇದೇ ರೀತಿಯಾಗಿ ವಿಶ್ವಕ್ಕೆ, ಭಾರತವು ಬ್ರಿಟಿಷ್ ಸರಕಾರದ ವಿರುದ್ಧ ನಡೆಸಿದ ಸ್ವಾತಂತ್ರ್ಯ ಸಂಗ್ರಾಮದ ಪರಿಚಯ ನೀಡಿದರು.

ಜುಲೈ 2, 1947 ರಂದು ಸಂವಿಧಾನ ಸಭೆಯಲ್ಲಿ ರಾಷ್ಟ್ರಧ್ವಜವನ್ನು ಅಂಗೀಕರಿಸಲಾಯಿತು. ಧ್ವಜವನ್ನು ಅಳವಡಿಸಿಕೊಳ್ಳುವ ನಿರ್ಣಯದ ನಂತರ ನಿಯೋಜಿತ ಪ್ರಧಾನಿ ಪಂ. ಜವಾಹರಲಾಲ್ ನೆಹರು (ಆಗಿನ ಉಪಾಧ್ಯಕ್ಷ ವೈಸರಾಯ್ನ ಕಾರ್ಯಕಾರಿ ಮಂಡಳಿ). ಅವರ ವಿಳಾಸದಲ್ಲಿ ಪಂ. ನೆಹರೂ ಹೇಳಿದರು: "ಈ ಸದನದಲ್ಲಿ ಅನೇಕರು ಪ್ರಸ್ತುತ ಕ್ಷಣದಲ್ಲಿ ನಾನು ಅನುಭವಿಸುವ ಹೊಳಪು ಮತ್ತು ಉಷ್ಣತೆಯನ್ನು ಅನುಭವಿಸುತ್ತಾರೆ ಎಂದು ನನಗೆ ಖಾತ್ರಿಯಿದೆ. ಈ ನಿರ್ಣಯ ಮತ್ತು ಧ್ವಜದ ಹಿಂದೆ ದತ್ತು ಸ್ವೀಕಾರಕ್ಕಾಗಿ ನಾನು ಈ ಸದನಕ್ಕೆ ಪ್ರಸ್ತುತಪಡಿಸುವ ಗೌರವವನ್ನು ಹೊಂದಿರುವ ಧ್ವಜದ ಹಿಂದೆ ಇತಿಹಾಸವಿದೆ, ರಾಷ್ಟ್ರದ ಅಸ್ತಿತ್ವದಲ್ಲಿ ಅಲ್ಪಾವಧಿಯ ಕೇಂದ್ರೀಕೃತ ಇತಿಹಾಸವಿದೆ. ನನಗೆ ನೆನಪಿದೆ, ಮತ್ತು ಈ ಸದನದಲ್ಲಿ ಅನೇಕರು ನೆನಪಿಸಿಕೊಳ್ಳುತ್ತಾರೆ, ನಾವು ಈ ಧ್ವಜವನ್ನು ಹೆಮ್ಮೆಯಿಂದ ಮತ್ತು ಉತ್ಸಾಹದಿಂದ ಮಾತ್ರವಲ್ಲದೆ ನಮ್ಮ ರಕ್ತನಾಳಗಳಲ್ಲಿ ಜುಮ್ಮೆನಿಸುವಿಕೆಯಿಂದ ಹೇಗೆ ನೋಡಿದ್ದೇವೆ ಮತ್ತು ನಾವು ಕೆಲವೊಮ್ಮೆ ಕೆಳಗೆ ಮತ್ತು ಹೊರಗಿರುವಾಗ ಈ ಧ್ವಜದ ನೋಟವು ನಮಗೆ ಮುಂದುವರೆಯಲು ಧೈರ್ಯ ನೀಡಿತು.

ಇಂದು ಇಲ್ಲಿ ಇಲ್ಲದ ಅನೇಕರು, ಈ ಧ್ವಜವನ್ನು ಮೇಲಕ್ಕೆತ್ತಿ ನಂತರದ ಪೀಳಿಗೆಗೆ ಹಸ್ತಾಂತರಿಸಿದ ಆರಂಭಿಕ ಸ್ವಾತಂತ್ರ್ಯ ಹೋರಾಟಗಾರರಲ್ಲಿ ಭಿಕೈಜಿಕಾಮಾ ಕೂಡ ಒಬ್ಬರು. ಭಾರತದಲ್ಲಿ ಮೊದಲ ರಾಷ್ಟ್ರಧ್ವಜವನ್ನು ಆಗಸ್ಟ್ 7, 1906 ರಂದು ಕಲ್ಕತ್ತಾದ ಪಾರ್ಸಿ ಬಗಾನ್ ಚೌಕದಲ್ಲಿ (ಗ್ರೀನ್ ಪಾರ್ಕ್) ಹಾರಿಸಲಾಯಿತು ಎಂದು ಹೇಳಲಾಗುತ್ತದೆ. ಧ್ವಜವು ಕೆಂಪು, ಹಳದಿ ಮತ್ತು ಹಸಿರು ಬಣ್ಣದ ಸಮತಲ ಪಟ್ಟಿಗಳಿಂದ ಕೂಡಿದೆ. ಎರಡನೇ ಧ್ವಜವನ್ನು ಪ್ಯಾರಿಸ್ನಲ್ಲಿ ಮೇಡಮ್ ಕಾಮಾ ಮತ್ತು ಅವರ ದೇಶಭ್ರಷ್ಟ ಕ್ರಾಂತಿಕಾರಿಗಳ

ಬ್ಯಾಂಡ್ 1907 ರಲ್ಲಿ ಹಾರಿಸಲಾಯಿತು (ಕೆಲವರ ಪ್ರಕಾರ 1905 ರಲ್ಲಿ). ಇದು ಮೊದಲ ಧ್ವಜಕ್ಕೆ ಹೋಲುತ್ತದೆ ಆದರೆ ಮೇಲಿನ ಪಟ್ಟಿಯು ಕೇವಲ ಒಂದು ಕಮಲವನ್ನು ಹೊಂದಿತ್ತು ಆದರೆ ಸಪ್ತಋಷಿಗಳನ್ನು ಸೂಚಿಸುವ ಏಳು ನಕ್ಷತ್ರಗಳನ್ನು ಹೊಂದಿದೆ. ಬರ್ಲಿನ್ನಲ್ಲಿ ನಡೆದ ಸಮಾಜವಾದಿ ಸಮ್ಮೇಳನದಲ್ಲಿ ಈ ಧ್ವಜವನ್ನು ಪ್ರದರ್ಶಿಸಲಾಯಿತು.

ಮ್ಯಾಡಮ್ ಭಿಕಾಜಿ ರುಸ್ತುಂ ಕೆ.ಆರ್. ಕಾಮಾ ಅವರು ಮುಂಬಯಿಯ ಸೊರಬ್‌ಜಿ ಫ್ರಾಮ್‌ಜಿ ಪಟೇಲ್ ಅವರ ಪುತ್ರಿ. ಮ್ಯಾಡಮ್ ಕಾಮಾ ಅವರು 1857ರ ಸುಮಾರಿಗೆ ಜನಿಸಿದರು. ಮುಂಬಯಿಯ ಗಣ್ಯ ಸಾಲಿಟರ್ ಆಗಿದ್ದ ಪಾರ್ಸಿ ಸುಧಾಕರ ಕೆ.ಆರ್. ಕಾಮ್ ಅವರ ಪುತ್ರನ ಜೊತೆ ಅವರ ವಿವಾಹವಾಯಿತು. ಮ್ಯಾಡಮ್ ಕಾಮಾ ಅವರು ತಮ್ಮ ಆರಂಭಿಕ ಶಿಕ್ಷಣವನ್ನು ಮುಂಬೈಯ ಅಲೆಕ್ಸಾಂಡ್ರ ಪಾರ್ಸಿ ಬಾಲಕಿಯರ ಶಾಲೆಯಲ್ಲಿ ಪಡೆದರು. ಅವರು ತಿಳಿಸಿದ ಪ್ರಕಾರ ಅವರ 1902 ರಿಂದ ಯುರೋಪ್‌ನಲ್ಲಿದ್ದು, ಜರ್ಮನಿ, ಪ್ಯಾರಿಸ್ ಸ್ಕಾಟ್‌ಲ್ಯಾಂಡ್ ಮತ್ತು ಲಂಡನ್‌ನಲ್ಲಿ ತಲಾ ಒಂದೊಂದು ವರ್ಷ ಕಳೆದರು. (ಬ್ರಿಟಿಷ್ ಸರಕಾರದ ಅಪರಾಧ ಪತ್ತೆಯ ಕಚೇರಿ ದಾಖಲೆ) ಮ್ಯಾಡಮ್ ಕಾಮಾ ಅವರು 22ನೇ ಆಗಷ್ಟ 1907ರಂದು ಜರ್ಮನಿನ ಸ್ಟುಟ್‌ಗಾರ್ಟ್‌ನಲ್ಲಿ ದ್ವಿತೀಯ ಅಂತಾರಾಷ್ಟ್ರೀಯ ಸಾಮಾಜಿಕ ಸಮ್ಮೇಳನದಲ್ಲಿ ವಿವಿಧ ದೇಶಗಳಿಂದ ಸುಮಾರು ಸಾವಿರಾರು ಸದಸ್ಯರು ಸೇರಿದ್ದರು.

ಆ ಸಭೆಯಲ್ಲಿ ಮ್ಯಾಡಮ್ ಕಾಮಾರು ಸಭಿಕರನ್ನು ದಂಗು ಬಡಿಸುವಂತಹ ಬಿರುಸಿನ ಭಾಷಣ ಮಾಡಿದರು. ಅವರು ತಮ್ಮ ಭಾವನಾತ್ಮಕ ಭಾಷಣದ ನಂತರ ಹಸಿರು, ಸ್ವರ್ಣ ಮತ್ತು ಕೇಸರಿ ತ್ರಿವರ್ಣಗಳನ್ನೊಳಗೊಂಡ ಧ್ವಜ ಏರಿಸಿದರು. ಇದು ಭಾರತದ ಸ್ವಾತಂತ್ರ್ಯದ ಹೋರಾಟದಲ್ಲಿ ಹುತಾತ್ಮರಾದ ಭಾರತೀಯರಿಂದ ಅಂಗೀಕಾರ ಪಡೆದಿದೆ. ಇಲ್ಲಿರುವ ಎಲ್ಲ ಮಹನೀಯರು ಎದ್ದು ನಿಂತು, ಭಾರತದ ಸ್ವಾತಂತ್ರ್ಯದ ರಾಷ್ಟ್ರೀಯ ಧ್ವಜಕ್ಕೆ ವಂದಿಸಬೇಕೆಂದು ವಿನಂತಿಸಿಕೊಂಡಿದ್ದಾರೆ. ಅಂತಾರಾಷ್ಟ್ರೀಯ ವೇದಿಕೆಯೊಂದರಲ್ಲಿ ಭಾರತ ಸ್ವಾತಂತ್ರ್ಯದ ರಾಷ್ಟ್ರೀಯ ಧ್ವಜ ಹಾರಿಸಿದ ಪ್ರಥಮ ವ್ಯಕ್ತಿ ಮ್ಯಾಡಮ್ ಕಾಮಾ ಅವರಾಗಿದ್ದಾರೆ.

ಮ್ಯಾಡಮ್ ಕಾಮಾ ಅವರು 22ನೇ ಅಗಷ್ಟ 1907ರಂದು ಏರಿಸಿದ ಧ್ವಜದಲ್ಲಿ ಮೂರು ಪಟ್ಟಿಗಳಿದ್ದವು. ಮೇಲ್ಭಾಗ ಮುಸ್ಲಿಂರಿಗೆ ಪವಿತ್ರವೆನಿಸಿದ ಹಸಿರು, ಮಧ್ಯಭಾಗದಲ್ಲಿ ಬೌದ್ಧರಿಗೂ ಸಿಖ್ಖರಿಗೂ ಪವಿತ್ರವೆನಿಸಿದ ಕೇಸರಿ ಮತ್ತು ಕೆಳಗೆ ಹಿಂದೂಗಳಿಗೆ ಪವಿತ್ರವೆನಿಸಿದ ಕೆಂಪು ವರ್ಣದ ಪಟ್ಟಿಯಿತ್ತು. ಆ ಧ್ವಜದಲ್ಲಿ ಬ್ರಿಟಿಷ್ ಭಾರತದ ಎಂಟು ಪ್ರಾಂತ್ಯಗಳನ್ನು ಪ್ರತಿನಿಧಿಸುವ ಎಂಟು ಕಮಲಗಳಿದ್ದವು. ಮಧ್ಯಭಾಗದ ಸ್ವರ್ಣ ಪಟ್ಟಿಯಲ್ಲಿ ದೇವನಾಗರಿ ಲಿಪಿಯಲ್ಲಿ 'ವಂದೇ ಮಾತರಂ' ಎಂದು ಬರೆಯಲಾಗಿತ್ತು. ಕೆಳಗಿನ ಕೆಂಪು ಪಟ್ಟಿಯಲ್ಲಿ ಧ್ವಜದ ಮುಕ್ತಭಾಗದಲ್ಲಿ ಸೂರ್ಯನ ಮತ್ತು ದಂಡವಿರುವ ಭಾಗದಲ್ಲಿ ಅರ್ಧ ಚಂದ್ರನ ಚಿತ್ರವೂ ಇತ್ತು.

ಮ್ಯಾಡಮ್ ಕಾಮಾ ಅವರ ಧ್ವಜವನ್ನು ಸ್ಪಷ್ಟವಾಗಿ ಬಹುಶಃ ಅವರೂ ಹಾಗೂ ಅವರ ಮಿತ್ರರಾದ ವೀರ ಸಾವರ್ಕರ್ ಮತ್ತು ಶ್ಯಾಮ್‌ಜಿ ಕೃಷ್ಣ ವರ್ಮಾ ಸೇರಿ ರಚಿಸಿರಬೇಕು. ಅವರ ಮಾರ್ಗದರ್ಶನದಲ್ಲಿ ಬಂಗಾಳದ ಒಬ್ಬ ಯುವ ಕ್ರಾಂತಿಕಾರಿ ಹೇಮಚಂದ್ರದಾಸ್ (ಕನುಂಗೋ) ರಚಿಸಿದ್ದಾರೆ. ಭಾರತದ ಪರಿಸ್ಥಿತಿಯ ಬಗ್ಗೆ ಅರಿವು ಮೂಡಿಸಲು ಮತ್ತು ಭಾರತದ ರಾಷ್ಟ್ರೀಯ ಚಳುವಳಿಗೆ ಬೆಂಬಲ ದೊರಕಿಸಿಕೊಳ್ಳಲು ಮ್ಯಾಡಮ್ ಕಾಮಾ ಅವರು ಸ್ಟುಟ್‌ಗರ್ಟ್‌ನಲ್ಲಿ ವಿಜಯ ಸಾಧಿಸಿದ 10 ವಾರಗಳ ನಂತರ ಅಮೇರಿಕಾಗೆ ಹೋಗಿ ಧ್ವಜದ ಜೊತೆಗೆ ಇಡೀ ದೇಶದ ಪ್ರವಾಸ ಮಾಡಿದರು.

ಲಂಡನ್‌ನ ಇಂಡಿಯಾ ಹೌಸ್‌ನಲ್ಲಿ 24ನೇ ನವೆಂಬರ್ 1908 ರಂದು ನಡೆದ ಸಭೆಯಲ್ಲಿ ಮ್ಯಾಡಮ್ ಕಾಮಾ ಅವರು ಸಿಲ್ಕ್ ಮತ್ತು ಚಿನ್ನದ ದಾರಗಳಲ್ಲಿ ಹೆಣೆದ ಒಂದು ಧ್ವಜವನ್ನು ಪ್ರದರ್ಶಿಸಿದ್ದಾರೆ. ಅವರು ಅದರಲ್ಲಿ "1908ರ ಹುತಾತ್ಮರ ಸ್ಮರಣಾರ್ಥ" ಎಂದು ಬರೆಯಲಾಗಿತ್ತು. ಗುರು ಗೋವಿಂದ್ ಸಿಂಗ್ ಅವರ ಜಯಂತಿಯನ್ನು 29ನೇ ಡಿಸೆಂಬರ್‌ನಂದು ವೆಸ್ಟ್ ಮಿನಿಸ್ಟರ್‌ನ ಕ್ಯಾಕ್ಸ್‌ಟನ್ ಹಾಲ್‌ನಲ್ಲಿ ಐತಿಹಾಸಿಕ ಸಭೆಯಾಗಿ ಆಚರಿಸಲಾಯಿತು. ಅದರಲ್ಲಿ ವಿ.ಡಿ. ಸಾವರ್ಕರ್, ಲಾಲಾ ಲಜಪತರಾಯ್, ಬಿ.ಸಿ. ಪಾಲ್ ಮತ್ತು ಇತರ ಕ್ರಾಂತಿಕಾರಿಗಳು ಭಾಗವಹಿಸಿದ್ದಾರೆ. ಹಿಂಬದಿಯಲ್ಲಿ 'ಸತ್ ಶ್ರೀ ಅಕಾಲ್' ಎಂದು ಬರೆದಿರುವ ಒಂದು ಭಿತ್ತಿ ಪತ್ರವಿದೆಯಲ್ಲದೆ ಎರಡು ಧ್ವಜಗಳು ಇವೆ. ಒಂದು ಸಿಖ್ಖರ ಧ್ವಜ ಮತ್ತು ಇನ್ನೊಂದು ಭಾರತದ ಸ್ವಾತಂತ್ರ್ಯದ ಧ್ವಜವಿರುವದು.

ಮ್ಯಾಡಮ್ ಕಾಮಾ ಅವರು ಸ್ಟುಟ್‌ಗರ್ಟ್‌ನಲ್ಲಿ ಆರೋಹಿಸಿದ ಮುಂದಿನ ಚರಿತ್ರೆಯನ್ನು ಅರಿತುಕೊಳ್ಳದ ಹೊರತು, ಭಾರತೀಯ ಧ್ವಜದ ವಿಕಾಸಕ್ಕಾಗಿ ಮ್ಯಾಡಮ್ ಕಾಮಾ ಅವರ ಕೊಡುಗೆಯ ಕುರಿತು ಅಪೂರ್ಣವಾಗುತ್ತದೆ. ಡಿಸೆಂಬರ್ 1935ರಲ್ಲಿ, ಕೊನೆಗೂ ಭಾರತಕ್ಕೆ ಹಿಂದಿರುಗುವ ಮುಂಚೆ ಮ್ಯಾಡಮ್ ಕಾಮಾ ಪಕ್ಷವಾತಕ್ಕೆ ಈಡಾಗಿದ್ದರು. ಇದರಿಂದ ಅವರು ದೈಹಿಕವಾಗಿ ಬಹಳಷ್ಟು ಕ್ಷೀಣಿಸಿದ್ದರು. ಅವರ ದೃಷ್ಟಿಯೂ ಮಂದವಾಗಿತ್ತು. ಅವರಿಗೆ ತಮ್ಮ ಅವಸಾನ ಹತ್ತಿರವಾಗಿರುವದು ಗೊತ್ತಾಗಿತ್ತು. ಆದರೆ ಭಾರತೀಯ ಧ್ವಜ ಮುಂದೊತ್ತಲೇಬೇಕಾಗಿತ್ತು. ಹೋರಾಟವೂ ಮುಂದುವರಿಯಬೇಕಾಗಿತ್ತು. ಆದುದರಿಂದ ಅವರು ತಮ್ಮ ಸಹಯೋಗಿ ಮಾಧವರಾವ್ ಅವರನ್ನು ಪ್ಯಾರಿಸ್‌ನಲ್ಲಿ ಕರೆಸಿಕೊಂಡು ತಮ್ಮ ಅಮೂಲ್ಯದ ಧ್ವಜವನ್ನು ಅವರಿಗೆ ನೀಡಿದರು. 33 ವರ್ಷಗಳ ಪರದೇಶ ವಾಸದ ನಂತರ ಅವರು ಡಿಸೆಂಬರ್ 1935ರಲ್ಲಿ ಭಾರತಕ್ಕೆ ಹಿಂದಿರುಗಿದರು. 16ನೇ ಆಗಸ್ಟ 1936ರಂದು ತಮ್ಮ ಮಾತೃಭೂಮಿಯಲ್ಲಿ ನಿಧನ ಹೊಂದಿದ್ದಾರೆ.

ಕಲ್ಕತ್ತಾದ ಧ್ವಜ ಮತ್ತು ಮ್ಯಾಡಮ್ ಕಾಮಾ ಅವರ ಧ್ವಜದ ನಡುವೆ ಬಹಳ ಸಾಮ್ಯವಿತ್ತು. ನಮ್ಮ ಸ್ವಾತಂತ್ರ್ಯ ಸಂಗ್ರಾಮದ ಆರಂಭದ ವರ್ಷಗಳಲ್ಲಿ ಅಮೇರಿಕಾ, ಜರ್ಮನಿ ಮತ್ತು ಮೆಸೋಪೊಟೇಮಿಯಾದಲ್ಲಿನ ಭಾರತದ ಕ್ರಾಂತಿಕಾರಿಗಳು ತ್ರಿವರ್ಣ ಧ್ವಜವನ್ನು ವ್ಯಾಪಕವಾಗಿ ಬಳಸಿದ್ದರು.

ಹಲವಾರು ಭಾರತೀಯ ನಗರಗಳು ಹೊಸ ದೆಹಲಿಯ ಹೃದಯಭಾಗದಲ್ಲಿರುವ ವಾಣಿಜ್ಯ ಕೇಂದ್ರವನ್ನು ಒಳಗೊಂಡಂತೆ ಬಿಕೈಜಿಕಾಮಾ ಹೆಸರಿನ ಬೀದಿಗಳು ಮತ್ತು ಸ್ಥಳಗಳನ್ನು ಹೊಂದಿವೆ. ಜನವರಿ 26, 1962 ರಂದು, ಭಾರತದ 11 ನೇ ಗಣರಾಜ್ಯ ದಿನದಂದು, ಭಾರತೀಯ ಅಂಚೆ ಮತ್ತು ಟೆಲಿಗ್ರಾಫ್ ಇಲಾಖೆಯು ಅವಳ ಗೌರವಾರ್ಥವಾಗಿ ಸ್ಮರಣಾರ್ಥ ಅಂಚೆಚೀಟಿಯನ್ನು ಬಿಡುಗಡೆ ಮಾಡಿತು. ■




# Wicket Gate in a Wicked Coach Pietermaritzburg and Gandhi

**D John Chelladurai,**
*Dean, FIDS, MGM University*

*(An article written by the author in the aftermath of his visit to Pietermaritzburg railway station on June 07, 2023, exactly 130 years after M K Gandhi was thrown out of the train compartment on a cold winter night.)*

An American missionary, Dr. John Mott once asked Gandhi what had been the most creative experience of his life. Gandhi recounted his inner struggle on that winter night when he had sat and shivered in the dark waiting room at Pietermaritzburg railway station as he was thrown out of the first-class compartment by a white policeman saying 'coolies' had place only in the van (luggage) compartment. And he told Dr. Mott, “My active nonviolence began from that day.”

In the tumultuous era of globalization, where borders blur, economies intertwine, and identities meld together, the city of Pietermaritzburg gives a message as profound as any revered pilgrimage site would. It is a message that inspired three remarkable individuals: Mahatma Gandhi, Martin Lr King Jr., and Madiba Nelson Mandela, who, through their extraordinary life, propelled civilization towards greater humanity.

Pietermaritzburg's message has two parts: First, every architect of wrong carries within oneself the potential for undoing that wrong and offering hope for a better future. Every wall of oppression has a wicket gate within itself. And, second, it teaches us that 'the wrong and the wrongdoer are not one.' We cannot discard the entirety for the transgressions of a few.

The second one first. Madiba, King, and Gandhi concurred with the notion that their fight was against the wrong, not the wrongdoer. They directed their efforts against evil, not the evildoer, recognizing that the wrongdoer, evildoer and sinner were our own brothers and sisters.

While differences and discord are inherent in human communities, the emerging trend of global living compels us to treat every challenge as an internal matter. Standing at the cusp of an imminent global village defined by pluralism, Gandhi found prophetic resonance in the message of Christ: 'Love thy enemy.' For, in this new

paradigm, the adversary is no longer an 'other'; increasingly they are fellow citizens and stakeholders. This realization drove Gandhi to construct the method of satyagraha, an inclusive post-modern approach to addressing human challenges.

The first message Pietermaritzburg imparts therefore is, akin to that of a surgeon distinguishing between the disease and the patient. We may learn to wash society of the wrong while seeking to redeem the antagonist from their errors, fostering a harmonious coexistence between both parties.

The other message from this City of Choice is a precursor to the first one. It revolves around how we interpret history and what we choose to take from it. In the tapestry of the Pietermaritzburg incident, we witness prominently those who cast Gandhi off the train and the one who bullied him the following day. However, for those with discerning eyes, the same canvas reveals the benevolent side of these 'antagonists' that is unfortunately often overlooked. The station master, in the morning after Gandhi's expulsion, offered words of comfort and provided him with another first-class ticket. Fellow passengers on subsequent train and coach rides pleaded with the conductor to spare Gandhi. These compassionate souls, all whites, were part of the very 'antagonists' who tormented him.

In a righteous struggle, these few virtuous individuals from opposing quarters form the trump card. Throughout history, the tried and tested strategy for triumph in warfare has been to identify the adversary's weakness and strike at its core. In a righteous struggle too this strategy works; the presence of the 'heart' in the opponent's camp serves as a weakness to them and a strength to the cause of satyagraha.

If we scan the historic occurrences through this premise, we see that even in the era of watertight segmentation, there were evidently few 'hearts' among the antagonists, that promised the hope of justice for the oppressed and redemption for the oppressor. The station master, fellow passengers, and the countless Europeans in SA whose souls gravitated towards Gandhi, such as the Doke family, the West family, the Pollacks, the Kallenbachs, Sonja Schlesien, and sympathizers like journalist Cartwright, bureaucrat Chimney, police officer's wife Sarah Alexander, et al., embodied that hope and redemption. When the world saw only the watertight compartments, Gandhi could see the presence of a wicket gate amidst repression, which nourished his believe on nonviolent struggle. He said, 'humans are essentially good, susceptible to error and amenable to truth.'

We witness similar dynamic in Madiba's struggle too. The likes of Denis Goldberg, Advocate George Bizos, and writer Alan Paton symbolized that gate of hope. White ministers like Orloff Miller, Clark Olsen, and James Reeb who risked their life by standing on the side of Martin Luther King Jr and his civil rights campaign, exemplify that gate to redemption.

The historic event at Pietermaritzburg railway station symbolizes both a seemingly impenetrable wall of suppression and a hope for redemption. In an increasingly complex yet interconnected world, Pietermaritzburg's message reminds us of the dialectical probability in every adversity and the possibility of addressing it in a manner of winning without defeating and healing without hurting. In a world ridden with violence, it opens a wicket gate for justice, reconciliation, and a sustainable future for all. ■

# WEBSITES ON MAHATMA GANDHI, PEACE, NONVIOLENCE AND RELATED TOPICS



## » www.gujaratvidyapith.ac.in

This is the official site of Gujarat Vidyapith, Ahmedabad. Gujarat Vidyapith founded by Mahatma Gandhiji in the year 1920. Mahatma Gandhiji was Founder & Former Chancellor of Gujarat Vidyapith.

## » www.gandhiashramsevagram.org

Official website of Sevagram Ashram, Wardha, India which was founded by Mahatma Gandhi in 1936. Including information for visitors to visit and stay at the Ashram and Mahatma Gandhi's life and work.

## » www.gandhiserve.org

It is a superb site on Mahatma Gandhi, including information about books on and by Gandhi in an on-line Mahatma Gandhi Book store which also has an online sale of bags, t-shirts, CD-ROMs, statues and more, all pertaining to Gandhi. Along with information about Gandhi Serve Foundation, there are also links to education, human rights, MK Gandhi, nonviolence and more

# ಗಾಂಧಿ ಮತ್ತು ಐನ್‌ಸ್ಟೀನ್



ಒಬ್ಬರನ್ನೊಬ್ಬರು ಭೇಟಿಯಾಗದೆಯೂ ಒಬ್ಬರು ಇನ್ನೊಬ್ಬರಿಂದ ಪ್ರಭಾವಿತಗೊಳ್ಳಬಹುದೆ? ಖಂಡಿತವಾಗಿಯೂ ಸಾಧ್ಯ. ಸರಿಸುಮಾರು ಒಂದೇ ಕಾಲದಲ್ಲಿ ಬಾಳಿದ ಗಾಂಧೀಜಿ ಮತ್ತು ಐನಸ್ಟೀನ್ ಅವರೇ ಇದಕ್ಕೆ ಸಾಕ್ಷಿಯಾಗಿದ್ದಾರೆ. ಐನ್‌ಸ್ಟೀನ್ ನಿಮಗೆಲ್ಲರಿಗೂ ತಿಳಿದಿರುವಂತೆ ಪ್ರಕೃತಿಯ ಸತ್ಯವನ್ನು ಶೋಧಿಸ ಹೊರಟ ವಿಜ್ಞಾನಿ. ಗಾಂಧೀಜಿಯವರು ಸತ್ಯದ ಮೇಲೆ ಪ್ರಯೋಗವನ್ನು ಆರಂಭಿಸಿದ ವಿಜ್ಞಾನಿ. ಹಾಗಾಗಿ ಇಬ್ಬರೂ ಸಂಶೋಧಕರೆ. ಐನ್‌ಸ್ಟೀನ್ ದ್ರವ್ಯರಾಶಿಯನ್ನು ಶಕ್ತಿಯಾಗಿ ಮಾರ್ಪಡಿಸುವ ಕ್ರಾಂತಿಕಾರಕ ಸಂಶೋಧನೆಯನ್ನು ಮಾಡಿದರು. ಇದರಿಂದಾಗಿ ಅವರ ಇಚ್ಛೆಗೆ ವಿರುದ್ಧವಾಗಿ ಎರಡನೆಯ ಮಹಾಯುದ್ಧದಲ್ಲಿ ಅಣುಬಾಂಬ್ ಅನೇಕ ನಗರಗಳನ್ನು ನಾಶಪಡಿಸಿತು. ಲಕ್ಷಾಂತರ ಜನಗಳ ಬದುಕನ್ನು ಬಲಿಪಡೆಯಿತು. ಇದರಿಂದಾಗಿ ನೊಂದ ಐನ್‌ಸ್ಟೀನ್ ಸಂಶೋಧನೆಗಳನ್ನು ಬದಿಗಿಟ್ಟು ಸಮಾಜವಿಜ್ಞಾನಿಯಾಗಿ ಬದಲಾದರು. ಅದೇ ಕಾಲಕ್ಕೆ ತನ್ನ ಪ್ರಯೋಗಶಾಲೆಯಲ್ಲಿ ಸತ್ಯಾಗ್ರಹವೆಂಬ ಶಾಂತಿಯ ಅಸ್ತ್ರವನ್ನು ಕಂಡಿ ಹಿಡಿದ ಗಾಂಧೀಜಿ ಸೂರ್ಯ ಮುಳುಗದ ನಾಡು ಎಂದು ಖ್ಯಾತಿ ಪಡೆದ ಬ್ರಿಟೀಶರಲ್ಲಿ ನಡುಕ ಹುಟ್ಟಿಸಿದ್ದರು. ಗಾಂಧೀಜಿಯವರು ದಂಡಿ ಸತ್ಯಾಗ್ರಹವನ್ನು ನಡೆಸಿದ ಸಮಯದಲ್ಲಿ ಐನ್‌ಸ್ಟೀನ್ ಗಾಂಧೀಜಿಯವರಿಗೆ ಪತ್ರವೊಂದನ್ನು ಬರೆದರು.

**"ನೀವು ನಿಮ್ಮ ಸತ್ಯಾನ್ವೇಷಣೆಯ ಪ್ರಯೋಗಶಾಲೆಯಲ್ಲಿ ಸತ್ಯಾಗ್ರಹವೆಂಬ ಹೊಸ ಅಸ್ತ್ರವನ್ನು ಅನ್ವೇಷಿಸಿರುವಿರಿ. ನಾವು ಬಯಸುವ ಬದಲಾವಣೆಯನ್ನು ಹಿಂಸೆಯಿಲ್ಲದೇ ಪಡೆಯಲು ಸಹಾಯಕವಾಗುವ ಈ ಅಸ್ತ್ರ ಖಂಡಿತವಾಗಿಯೂ ಮುಂದೆ ಜಗತ್ತಿನ ತುಂಬಾ ಹರಡುವುದು. ಇಂಥದೊಂದು ಸಂಶೋಧನೆಗಾಗಿ ನಿಮ್ಮನ್ನು ಅಭಿನಂದಿಸುತ್ತೇನೆ. ಆದಷ್ಟು ಬೇಗ ನಿಮ್ಮನ್ನು ಭೇಟಿಯಾಗಲು ಕಾಯುತ್ತಿದ್ದೇನೆ"**



ಆದರೆ ಈ ಭೇಟಿ ಸಾಧ್ಯವಾಗಲೇ ಇಲ್ಲ. ಐನ್‌ಸ್ಟೀನ್ ಅವರ ಕೋಣೆಯಲ್ಲಿ ಗಾಂಧೀಜಿಯವರ ಭಾವಚಿತ್ರವನ್ನು ಇಟ್ಟುಕೊಂಡಿದ್ದರು. ಗಾಂಧೀಜಿಯವರ ಎಪ್ಪತ್ತನೆಯ ಹುಟ್ಟುಹಬ್ಬಕ್ಕೆ ಶುಭಾಶಯವನ್ನು ಕೋರುತ್ತಾ ಐನ್‌ಸ್ಟೀನ್ ಹೀಗೆ ಹೇಳಿದ್ದರು, "ಬಹುಶಃ ನಮ್ಮ ಮುಂದಿನ ತಲೆಮಾರು ಇಂಥಹ ವಿಶೇಷವಾದ ವ್ಯಕ್ತಿಯೊಬ್ಬ ರಕ್ತ, ಮಾಂಸಗಳಿಂದ ಕೂಡಿದ ದೇಹವನ್ನು ಹೊತ್ತು ಈ ನೆಲದ ಮೇಲೆ ಓಡಾಡಿದ್ದ ಎಂದರೆ ನಂಬಲಾರದೇನೋ?" ಎಂದು. ಅಷ್ಟರಮಟ್ಟಿಗೆ ಅವರನ್ನು ಗಾಂಧೀಜಿ ಪ್ರಭಾವಿಸಿದ್ದರು.

ಗಾಂಧೀಜಿಯವರ ಹತ್ಯೆಯಾದಾಗ ಐನ್ ಸ್ಟೀನ್ ಬಹಳ ನೊಂದಿದ್ದರು. ತನ್ನದೇ ಅಪರಾಧಗಳಿಂದ ಅವರು ತಮ್ಮ ಜೀವ ಕಳಕೊಂಡರು ಎಂದು ವಿಷಾದಿಸಿದ್ದರು. ತಾನು ನಂಬಿದ ತತ್ವಕ್ಕೆ ಕೊನೆಯವರೆಗೂ ಬದ್ಧರಾಗಿದ್ದುದು ಒಂದು ಅಪರಾಧವಾದರೆ, ತನ್ನ ರಕ್ಷಣೆಗೆ ಅಂಗರಕ್ಷಕರನ್ನು ನೇಮಿಸಿಕೊಳ್ಳದೇ ಹೋದದ್ದು ಇನ್ನೊಂದು ಅಪರಾಧ ಎಂದು ಹೇಳಿ ಗಾಂಧೀಜಿಯವರ ಬದ್ಧತೆ ಮತ್ತು ಸರಳತನವನ್ನು ಕೊಂಡಾಡಿದ್ದರು.

ಇನ್ನೂ ಆಸಕ್ತಿಕರವಾದ ವಿಷಯವೆಂದರೆ ಗಾಂಧಿ ಮತ್ತು ಐನ್ಸ್ಟೈನ್ ಅವರ ಕಾಲಾವಧಿಯ ನಂತರ ಒಬ್ಬರನ್ನೊಬ್ಬರು ಸಂಧಿಸಿದರು! ಸ್ವರ್ಗದಲ್ಲಿ ಭೇಟಿಯಾದರು ಅಂದುಕೊಂಡಿರಾ? ಖಂಡಿತ ಅಲ್ಲ. ಉಡುಪಿಯ ಮಣಿಪಾಲ ಯುನಿವರ್ಸಿಟಿಯಲ್ಲಿ ಕೆಲಕಾಲ ಕೆಲಸ ಮಾಡಿದ್ದ ಸುಂದರ ಸರುಕೈ ಅವರು ಬರೆದ ನಾಟಕವೊಂದರಲ್ಲಿ ಅವರಿಬ್ಬರೂ ಒಬ್ಬರನ್ನೊಬ್ಬರು ಸಂಧಿಸುವ ದೃಶ್ಯವಿದೆ. Two fathers ಎಂಬ ಈ ನಾಟಕವನ್ನು ಹಿಂದಿಯ ಪ್ರಸಿದ್ಧ ನಿರ್ದೇಶಕರಾದ ಶ್ರೀನಿವಾಸ ಭಾಷ್ಯಂ ಅವರು ರಂಗಕ್ಕೆ ತಂದಿದ್ದರು.

ಹೀಗೆ ಒಂದೇ ಕಾಲಕ್ಕೆ ಸೇರಿದವರಾದರೂ ಎಂದಿಗೂ ಭೇಟಿಯಾಗದ ಐನ್‌ಸ್ಟೀನ್‌ರಂತಹ ವಿಜ್ಞಾನಿಯನ್ನೂ ಗಾಂಧೀಜಿ ಪ್ರಭಾವಿಸಿದ್ದರು.

**ಸಂಗ್ರಹ : ಸುಧಾ ಅಡುಕುಳ**

# ಮಹಾತ್ಮ ಗಾಂಧಿಯವರ ಮಹತ್ವಗಳು

- ಇಂಡಿಯಾ  ಅಲ್ಲದೆ, ಲಂಡನ್, ಅಮೆರಿಕೆ ,ಸೌತ್ ಆಫ್ರಿಕೆ, ಸ್ವಿಟ್ಜರ್ ಲ್ಯಾಂಡ್, ಫ್ರಾನ್ಸ್,ಕೆನಡಾ, ಸ್ಪೇನ್, ಉಗಾಂಡಾ, ದುಬೈ, ಶ್ರೀಲಂಕಾ ಹೀಗೆ ಜಗತ್ತಿನ 184 ರಾಷ್ಟ್ರಗಳ ಪ್ರಮುಖ ಸ್ಥಳಗಳಲ್ಲಿ ನಮ್ಮ ರಾಷ್ಟ್ರಪಿತನ ಪ್ರತಿಮೆಗಳು ಪ್ರತಿಸ್ಥಾಪನೆಗೊಂಡಿವೆ .
- ಡಿಸೆಂಬರ್ 14 , 2022  ರಂದು ವಿಶ್ವಸಂಸ್ಥೆಯ  ಕೇಂದ್ರ ಕಚೇರಿಯಲ್ಲಿ ಗಾಂಧಿ ಪ್ರತಿಮೆ ಲೋಕಾರ್ಪಣೆಯಾಗಿದೆ. ಈ ಪ್ರತಿಷ್ಠಿತ ಸ್ಥಾನ ಪಡೆದ ಭಾರತ ಅಷ್ಟೇ ಅಲ್ಲ, ಪ್ರಪಂಚದ ಏಕೈಕ ನೇತಾರ ಬಾಪೂ.
- ಕೇಂಬ್ರಿಡ್ಜ್ ವಿಶ್ವ ವಿದ್ಯಾಲಯದಲ್ಲಿ ಮಹಾತ್ಮ ಗಾಂಧೀಜಿಯವರ ಕುರಿತು ಬೋಧನೆ ಮಾಡಲಾಗುತ್ತಿದೆ. ಬಾಪೂ ಪ್ರತಿಪಾದಿಸಿದ ತತ್ವ – ಸಿದ್ಧಾಂತಗಳು, ಸತ್ಯ ಅಹಿಂಸಾ ಮಂತ್ರ, ಅವರು ನಡೆದು ಹೋದ ಶಾಂತಿಯ ಪಥ ಮನುಕುಲ ಉಳಿಯಲು ಅಂತಿಮ ಮಾರ್ಗವೆಂದು ಮನವರಿಕೆ ಮಾಡಿ ಕೊಡಲಾಗುತ್ತಿದೆ.
- ಸರ್ವರನ್ನು ಪ್ರೀತಿಸುವುದು ಗಾಂಧೀಜಿಯವರ ಜೀವನದ ಪ್ರಮುಖ ಆದ್ಯತೆಯಾಗಿತ್ತು, ಮಹಾತ್ಮನ ಮಾನವೀಯ ಮೌಲ್ಯಗಳನ್ನು ಬೋಧಿಸಲಾಗುತ್ತಿದೆ.
- ಚೀನಾ, ಜಪಾನ್ ಗಳಲ್ಲಿ 0 ದಿಂದ 15 ನೇ ತರಗತಿಯವರೆಗೆ ಗಾಂಧೀಜಿಯವರ ಕುರಿತು ಪಾಠ ಮಾಡಲಾಗುತ್ತಿದೆ .
- ಪ್ರಪಂಚದ 1262 ಕಡೆ ಗಾಂಧೀಜಿಯವರ   Mahatma Gandhi research centre  (MGRC) ಹೆಸರಿನ ಅಧ್ಯಯನ ಕೇಂದ್ರಗಳಿವೆ.
- ಚರ್ಚಿಲ್ – ಒಂದು ಅರ್ಥದಲ್ಲಿ ನಮಗೆ ರಾಜಕೀಯ ವೈರಿಯಾಗಿದ್ದವರು. ಎರಡು ಸಲ ಇಂಗ್ಲೆಂಡ್ ನ ಪ್ರಧಾನಿ ಕೂಡಾ ಆಗಿದ್ದವರು. 1931ರಲ್ಲಿ ಗಾಂಧೀಜಿಯವರನ್ನು 'ಹಾಫ್ ನೇಕೆಡ್ ಫಕೀರ ' ಎಂದು ಮೂದಲಿಸಿದ್ದವರು. 'ಸ್ವಾತಂತ್ರ್ಯ ಕೇಳಲು ಬಂದ ಇಂಡಿಯನ್ ಬೆಗ್ಗರ್' ಎಂದು ಅಪಮಾನ ಮಾಡಿದ್ದವರು. ಗಾಂಧಿಯನ್ನು ಕಂಡರೆ ನಖಶಿಖಾಂತ ಉರಿಯುತ್ತಿದ್ದವರು ಮತ್ತು ಕೊನೆಯವರೆಗೂ ದ್ವೇಷ ಮಾಡಿದವರು . 1948 ರಲ್ಲಿ  ಹಂತಕನ ಗುಂಡಿಗೆ ಸರ್ವೋದಯ ಫಿಲಾಸಫಿಯ ಸರ್ವೋಚ್ಚ ನೇತಾರ  ಬಾಪೂಜಿ ಬಲಿಯಾದರು. ಆಗ  ನಿವೃತ್ತ ಜೀವನದಲ್ಲಿದ್ದ ಚರ್ಚಿಲ್ ಗಾಂಧಿ ಹತ್ಯೆಯ ಸುದ್ದಿಯನ್ನು ಕೇಳಿದ ಕೂಡಲೇ ಈ ರೀತಿ ಉದ್ಗಾರ ತೆಗೆದರು. " ಗಾಂಧಿ ಕೊಲೆಯಾದರು ಅನ್ನುವ ಸುದ್ದಿಯನ್ನು ಕೇಳಿ ನನ್ನ ಹೃದಯ ಸ್ತಂಬಿತಗೊಂಡಿತು ". ಪ್ರತಿ ಸಲವೂ ಗಾಂಧಿ 'ಸಹೃದಯ ಸ್ನೇಹಿತ' ಎಂದು ನನ್ನನ್ನು ಕರೆಯುತ್ತಿದ್ದಾಗ, ಆತನಿಗೆ ಸಕಾರಾತ್ಮಕವಾಗಿ ಸ್ಪಂದಿಸದೇ ನನ್ನ ಅಧಿಕಾರ ದರ್ಪದಿಂದ ' ಅನರ್ಹ ವ್ಯಕ್ತಿಯಂತೆ ' ನಡೆದುಕೊಂಡೆ ಎಂದು ತನ್ನ ಆತ್ಮ ಚರಿತ್ರೆಯಲ್ಲಿ ಚರ್ಚಿಲ್  ಬರೆದುಕೊಂಡಿದ್ದಾರೆ .
- ಜಗತ್ ಪ್ರಸಿದ್ಧ ವಿಜ್ಞಾನಿ ಆಲ್ಬರ್ಟ್  ಐನ್‌ಸ್ಟೀನ್  ಅವರು ತಮ್ಮ ಹೊಸ ಮನೆ ಕಟ್ಟಿದಾಗ ಅಲಂಕಾರಕ್ಕಾಗಿ ಯಾರ ಭಾವಚಿತ್ರವನ್ನು ಹಾಕಿಕೊಳ್ಳಲು ಒಪ್ಪಲಿಲ್ಲ ಗಾಂಧೀಜಿಯವರ ಭಾವಚಿತ್ರವನ್ನು ಬಿಟ್ಟು. ಅದೇ ರೀತಿ ಅಮೆರಿಕೆಯ ನಿಗ್ರೋಗಳ ನಾಯಕ ಡಾಕ್ಟರ್ ಮಾರ್ಟಿನ್ ಲೂಥರ್ ಕಿಂಗ್ ಜ್ಯುನಿಯರ್, ಬರಾಕ್ ಒಬಾಮಾ ಮತ್ತು ಇಸ್ರೇಲ್ ಪ್ರಥಮ ಪ್ರಧಾನಿ ತಮ್ಮ ವೈಯಕ್ತಿಕ ಕೊಠಡಿಯಲ್ಲಿ ಗಾಂಧೀಜಿಯವರ ಭಾವಚಿತ್ರವನ್ನು ಮಾತ್ರ ಹಾಕಿಕೊಂಡರು. ಅಂತೆಯೇ, ತಮಿಳುನಾಡಿನ ಜೆ.ಸಿ.ಕುಮಾರಪ್ಪ  ಮತ್ತು ಬೆಂಗಳೂರಿನ ನರಸಿಂಹಯ್ಯ ಅವರೂ ಸಹ ಗಾಂಧೀಜಿಯವರ ಭಾವಚಿತ್ರವನ್ನು ಬಿಟ್ಟು ಬೇರೆ ಯಾವ ನಾಯಕರ ಫೋಟೋವನ್ನು ಹಾಕಿಕೊಂಡಿರಲಿಲ್ಲ.

(ಸಂಗ್ರಹ : ನೇತಾಜಿ ಗಾಂಧಿ)







ಅರಸೀಕೆರೆಯ ಕಸ್ತೂರ್ ಬಾ ಟ್ರಸ್ಟ್ ಆಶ್ರಮದಲ್ಲಿ ನಡೆದ ಮಹಾತ್ಮ ಗಾಂಧಿ ಮತ್ತು ವಿನೋಬಾ ಭಾವೆ 'ನಂದಿನಿ' ರಾಷ್ಟ್ರೀಯ ಯುವ ಮಹಿಳಾ ಶಿಬಿರದ ಉದ್ಘಾಟನಾ ಸಮಾರಂಭದಲ್ಲಿ ಅರಸೀಕೆರೆ ವಿಧಾನಸಭಾ ಅರಸೀಕೆರೆ ವಿಧಾನಸಭಾ ಶಾಸಕರಾದ ಕೆ ಎಂ ಶಿವಲಿಂಗೇಗೌಡರು ಮಾತನಾಡಿದರು



ಇತ್ತೀಚಿಗೆ ಅರಸೀಕೆರೆಯ ಕಸ್ತೂರ್ ಬಾ ಆಶ್ರಮದಲ್ಲಿ ನಡೆದ ರಾಷ್ಟ್ರೀಯ ಯುವ ಮಹಿಳಾ ಶಿಬಿರದ ಉದ್ಘಾಟನೆಗೆ ಆಗಮಿಸಿದ ದೆಹಲಿಯ ಕೇಂದ್ರ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ರಾಮಚಂದ್ರ ರಾಹಿ ಅವರನ್ನು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷರಾದ ಡಾ .ವೂಡೇ ಪಿ ಕೃಷ್ಣ ಅವರು ಸ್ವಾಗತಿಸಿದ ಸಂದರ್ಭ .




ಅರಸೀಕೆರೆಯ ಕಸ್ತೂರ್ ಬಾ ಟ್ರಸ್ಟ್ ಆಶ್ರಮದಲ್ಲಿ ನಡೆದ ರಾಷ್ಟ್ರೀಯ ಯುವ ಮಹಿಳಾ ಶಿಬಿರದ ಸಮಾರೋಪ ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಸರೋಜಮ್ಮ  ತುಳಸೀದಾಸಪ್ಪ ಅವರು ಶಿಬಿರದ ವಿದ್ಯಾರ್ಥಿನಿಯರಿಗೆ ಸರ್ಟಿಫಿಕೇಟ್ ವಿತರಿಸಿದರು




ರಾಷ್ಟ್ರೀಯ ಯುವ ಮಹಿಳಾ ಶಿಬಿರದಲ್ಲಿ ಮುಖ್ಯ ಅತಿಥಿಗಳಾಗಿ ಹಾಗೂ ಗಾಂಧಿ ವಿಚಾರಗಳ ಬಗ್ಗೆ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷರಾದ ಡಾ ವೂಡೇ ಪಿ ಕೃಷ್ಣ ಮಾತನಾಡಿದರು



‘ನಂದಿನಿ’ ಶಿಬಿರದಲ್ಲಿ ಊಟಕ್ಕೆ ಮುಂಚೆ ಪ್ರಾರ್ಥನೆ




ಮಂಗಳೂರು ವಿಶ್ವ ವಿದ್ಯಾಲಯದ ಆಶ್ರಯದಲ್ಲಿ ನಡೆದ ರಾಷ್ಟ್ರೀಯ ಸೇವಾ ಯೋಜನಾ ಶಿಬಿರದಲ್ಲಿ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ಡಾ . ವೂಡೇ ಪಿ ಕೃಷ್ಣ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು.



ವಾರ್ತಾ ಮತ್ತು ಸಾರ್ವಜನಿಕ
ಸಂಪರ್ಕ ಇಲಾಖೆ






# ಭಾರತವನ್ನು ಚಂದ್ರನ ಅಂಗಳಕ್ಕೆ ತಲುಪಿಸಿದ




## ಇಸ್ರೋ ವಿಜ್ಞಾನಿಗಳಿಗೆ ಅಭಿನಂದನೆಗಳು



ವಿಕ್ರಂ ನೌಕೆಯನ್ನು ಯಶಸ್ವಿಯಾಗಿ ಚಂದ್ರನ ಅಂಗಳದಲ್ಲಿ ಇಳಿಸುವ ಮೂಲಕ ನಮ್ಮ ಇಸ್ರೋ ವಿಜ್ಞಾನಿಗಳು ಇಡೀ ದೇಶಕ್ಕೆ ಹೆಮ್ಮೆ ತಂದಿದ್ದಾರೆ. ಈ ಸಾಧನೆಯು ಭಾರತವನ್ನು ಚಂದ್ರನ ತಲುಪಿದ ಕೆಲವೇ ಕೆಲವು ಗಣ್ಯ ರಾಷ್ಟ್ರಗಳ ಸಾಲಿನಲ್ಲಿ ನಿಲ್ಲಿಸಿದೆ ಮತ್ತು ಚಂದ್ರನ ದಕ್ಷಿಣ ಧ್ರುವಕ್ಕೆ ಹೆಜ್ಜೆ ಇಟ್ಟ ಮೊಟ್ಟ ಮೊದಲ ರಾಷ್ಟ್ರ ಎಂಬ ಹೆಗ್ಗಳಿಕೆ ತಂದುಕೊಟ್ಟಿದೆ. ಈ ಐತಿಹಾಸಿಕ ಸಾಧನೆಯು ನಮ್ಮ ವಿಜ್ಞಾನಿಗಳ ಅನೇಕ ದಶಕಗಳ ಪರಿಶ್ರಮದ ಪ್ರತಿಫಲವಾಗಿದೆ.

**ಇಸ್ರೋ ಸಂಸ್ಥೆಯ ಪ್ರಧಾನ ಕಛೇರಿ ಸೇರಿದಂತೆ ಅದರ ಅನೇಕ ಸಹ-ಸಂಸ್ಥೆಗಳಿಗೆ ತವರಾಗಿರುವ ಕರ್ನಾಟಕ, ಈ ಪಯಣದಲ್ಲಿ ಭಾಗಿಯಾಗಲು ಹೆಮ್ಮೆ ಪಡುತ್ತದೆ.**

## ಜೈ ಹಿಂದ್ . ಜೈ ಕರ್ನಾಟಕ.







ಕರ್ನಾಟಕ ವಾರ್ತೆ

